

ಕನ್ನಡವಿಶ್ವವಿದ್ಯಾಲಯ, ಹಂಪಿ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ
ಸಂಶೋಧನಾ ಸಂಪ್ರಬಂಧ

# ಕನ್ನಡ ದಲಿತ ಆತ್ಮಕಥೆಗಳಲ್ಲಿ ಬಾಲ್ಯ

**(ಗೌರ್ಮೆಂಟ್ ಬ್ರಾಹ್ಮಣ, ಊರುಕೇರಿ, ಮಣೆಗಾರ)**

**ಮುರಳಿಧರ. ಆರ್**
ಸಂಶೋಧನಾ ವಿದ್ಯಾರ್ಥಿ
ನೋಂದಣಿ ಸಂಖ್ಯೆ : KVMBKS-00329



ಮಾರ್ಗದರ್ಶಕರು
**ಡಾ. ಕೆ.ವಿ. ಚಂದ್ರಣ್ಣಗೌಡ** ಎಂ.ಎ.,ಎಲ್.ಎಲ್.ಬಿ.,ಪಿಎಚ್.ಡಿ.,
ಉಪಪ್ರಾಚಾರ್ಯರು, ಮುಖ್ಯಸ್ಥರು
ಕನ್ನಡ ವಿಭಾಗ, ವಿ.ವಿ.ಪುರಂ ಸಂಜೆ ಕಾಲೇಜು
ಕೆ.ಆರ್. ರಸ್ತೆ, ಬೆಂಗಳೂರು-04




ಕಾವ್ಯಮಂಡಲ
ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-560004

2009

785

# ದೃಢೀಕರಣ ಪತ್ರ

**ಮುರಳಿಧರ. ಆರ್.** ರವರು ಎಂ.ಫಿಲ್. ಪದವಿಗಾಗಿ ಬರೆದು ಸಿದ್ಧಪಡಿಸಿರುವ **ಕನ್ನಡ ದಲಿತ ಆತ್ಮಕಥೆಗಳಲ್ಲಿ ಬಾಲ್ಯ (ಗೌರ್ವ್ಮೆಂಟ್ ಬ್ರಾಹ್ಮಣ, ಊರುಕೇರಿ, ಮಣೆಗಾರ)** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲೀ, ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

**ಡಾ. ಕೆ.ವಿ. ಚಂದ್ರಣ್ಣಗೌಡ**

ಎಂ.ಎ.,ಎಲ್.ಎಲ್.ಬಿ.,ಪಿಎಚ್.ಡಿ.,

ಉಪಪ್ರಾಚಾರ್ಯರು, ಮುಖ್ಯಸ್ಥರು

ಕನ್ನಡ ವಿಭಾಗ, ವಿ.ವಿ.ಪುರಂ ಸಂಜೆ ಕಾಲೇಜು

ಕೆ.ಆರ್. ರಸ್ತೆ, ಬೆಂಗಳೂರು-04

ಸ್ಥಳ : ಬೆಂಗಳೂರು

ದಿನಾಂಕ :

785

# ಪ್ರಮಾಣ ಪತ್ರ

**ಕನ್ನಡ ದಲಿತ ಆತ್ಮಕಥೆಗಳಲ್ಲಿ ಬಾಲ್ಯ (ಗೌರ್ಮೆಂಟ್ ಬ್ರಾಹ್ಮಣ, ಊರುಕೇರಿ, ಮಣೆಗಾರ)** ಎಂಬ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡವಿಶ್ವವಿದ್ಯಾಲಯಕ್ಕೆ ಕಾವ್ಯಮಂಡಲದ ವತಿಯಿಂದ ಸಲ್ಲಿಸಲು **ಡಾ. ಚಂದ್ರಣ್ಣಗೌಡ** ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧದ ವಿಷಯವಾಗಿ ಇದುವರೆವಿಗೂ ಬೇರೆ ಯಾವುದೇ ಪದವಿಗಾಗಲೀ ಅಥವಾ ಇನ್ನಿತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ : ಬೆಂಗಳೂರು
ದಿನಾಂಕ :

**ಮುರಳಿಧರ. ಆರ್**
ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

# ಅಧ್ಯಾಯ - ೧

## ಪ್ರಕಾರ ಸಾಹಿತ್ಯವಾಗಿ ಆತ್ಮಕಥೆಗಳು ಬೆಳೆದು ಬಂದ ಬಗೆ

ಕನ್ನಡ ಸಾಹಿತ್ಯಕ್ಕೆ 19ನೇ ಶತಮಾನ ಎಲ್ಲಾ ದಿಕ್ಕಿನಿಂದಲೂ ಸುವರ್ಣ ಪಥವನ್ನು ನಿರ್ಮಿಸಿದ ಕಾಲ. ಯಾಕೆಂದರೆ ದೇಶದ ಚರಿತ್ರೆಯಲ್ಲಿ ಒಂದು ಪರ್ವಕಾಲವಾಗಿ ಮೈದುಂಬಿ ನಲಿದಾಡಿದಂತಹ ದಿನಗಳವು. ಈ ಅವಧಿಯಲ್ಲಿ ನಮ್ಮ ರಾಷ್ಟ್ರದ ಸ್ವಾತಂತ್ರ್ಯ ಪೂರ್ಣಹರಣವಾದದ್ದು ಹಾಗೂ ಅದನ್ನು ಮತ್ತೆ ಹಿಂಪಡೆಯಬೇಕೆಂಬ ಹಠಛಲ ಭಾರತೀಯರಲ್ಲಿ ಮೂಡಿ ನಿಂತದ್ದು ಇದೆ ಶತಮಾನದಲ್ಲಿ. ಅಂತೆಯೇ ಪಾಶ್ಚಾತ್ಯರ ಶಿಕ್ಷಣಕ್ರಮ, ಆಚಾರ-ವಿಚಾರಗಳು ಮತ್ತು ಸಾಹಿತ್ಯ ಪ್ರಕಾರಗಳು ನಮಗೆ ಪರಿಚಯವಾದವು, ಜೊತೆಯಲ್ಲಿಯೇ ಅನೇಕ ಕ್ರಾಂತಿಕಾರಕ ವಿಚಾರಗಳು ತಲೆ ಎತ್ತಿದವು. ಹಿಂದಿನ ಸಹಸ್ರಾರು ವರ್ಷಗಳ ಜಡತೆಗೆ ಹೊಸ ಚಾಲನೆ ದೊರೆಯಿತು. ನಮ್ಮ ಬದುಕನ್ನು ಆವರಿಸಿದ್ದ ಅನೇಕ ನಂಬಿಕೆ, ಆಚರಣೆಗಳನ್ನು ಪ್ರಶ್ನಿಸುವ ಎದೆಗಾರಿಕೆ ಬೆಳೆಯಿತು. ಒಟ್ಟಾರೆ ಹಳತು-ಹೊಸದರ ಘರ್ಷಣೆಯಿಂದ ಬದುಕಿನ ಹೊಸತನ ಮೊಳಕೆಯೊಡೆಯ ತೊಡಗಿತು.

ಭಾರತೀಯ ಪರಂಪರೆಯೊಟ್ಟಿಗೆ ಕುಸಿದು ಹೋಗಿದ್ದ ಜೀವನ ಮೌಲ್ಯಗಳು ಪಾಶ್ಚಾತ್ಯರ ಪ್ರಭಾವದಿಂದ ಪುನಶ್ಚೇತನಗೊಂಡವು. ಇವೆಲ್ಲದರ ಪ್ರೇರಕ ಶಕ್ತಿಯಾಗಿ ಭಾರತೀಯ ಸಾಹಿತ್ಯ ಕ್ರಿಯಾಶೀಲವಾಗತೊಡಗಿತು. ಅಂತೆಯೇ ಭಾಷೆ, ಸಾಹಿತ್ಯಗಳ ಅರುಣೋದಯವಾಯಿತು. ಯಾವುದನ್ನು ನಾವಿಂದು ಆಧುನಿಕ ಸಾಹಿತ್ಯವೆಂದು ಕರೆಯುತ್ತೇವೆಯೋ ಅದರ ಮೊಳಕೆಯೊಡದದ್ದು ನಿಶ್ಚಿತವಾಗಿ 19ನೇ ಶತಮಾನದಲ್ಲಿ ಈ ಶತಮಾನದ ಹೊಸ್ತಿಲಲ್ಲಿಯೇ ಭಾರತೀಯ ಎಲ್ಲಾ ಭಾಷೆಗಳಲ್ಲಿಯೂ ಹೊಸಹೊಸ ಸಾಹಿತ್ಯ ಪ್ರಕಾರಗಳು ಕವಲೊಡೆಯತೊಡಗಿದವು.

ಈ ಹಿನ್ನಲೆಯಲ್ಲಿ ಹೊಸ ಆಶಯದೊಂದಿಗೆ ಮೈದಳಿದ ಕನ್ನಡ ಸಾಹಿತ್ಯ ದೇವರು, ಧರ್ಮ, ಪುರಾಣಗಳ ಸಂಬಂಧವನ್ನು ನಿರಾಕರಿಸಿ ಪ್ರಸ್ತುತ ಬದುಕಿಗೆ ಹತ್ತಿರವಾಯಿತು. ಜೊತೆಗೆ ಪಾಶ್ಚಾತ್ಯರಿಂದ ಎರವಲಾಗಿ ಬಂದ ಮುದ್ರಣ, ಗ್ರಂಥ,

ಪ್ರಕಟಣೆ ಪತ್ರಿಕೆಗಳ ಪ್ರಭಾವದಿಂದ ರಾಜಾಶ್ರಯ ಪಡೆದಿದ್ದ ಸಾಹಿತ್ಯ ರಾಜಾಶ್ರಯವನ್ನು ತೊರೆದು ಜನಾಶ್ರಯ ಪಡೆಯತೊಡಗಿತು.

ಈ ನಿಟ್ಟಿನಲ್ಲಿಯೇ ದುಡಿದ ಕ್ರೈಸ್ತ ಮಿಷನರಿಗಳು ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮ ನೀಡಿದರು. 19ನೇ ಶತಮಾನದ ನಂತರ ಪಾಶ್ಚಿಮಾತ್ಯ ಸಾಹಿತ್ಯದ ಪ್ರೇರಣೆ ಪಡೆದ ಕನ್ನಡ ಸಾಹಿತ್ಯ ಪರಂಪರೆಯೊಟ್ಟಿಗೆ ಬೆಳೆಯುತ್ತಲೆ ಜನರ ಬದುಕಿಗೆ ಹತ್ತಿರವಾಗತೊಡಗಿತು. ಈ ನಿಟ್ಟಿನಲ್ಲಿಯೇ ಹೊಸ ರೂಪಪಡೆದ ಹೊಸಗನ್ನಡ ಸಾಹಿತ್ಯಕ್ಕೆ ಕೆಂಪುನಾರಾಯಣನ ಮುದ್ರಾಮಂಜೂಷ ಸೂಚನಾಫಲಕವಾದರೆ ಕನ್ನಡದ ಮುಂಗೋಳಿ ಎನಿಸಿಕೊಂಡ ಮುದ್ದಣ್ಣನ ಅದ್ಭುತರಾಮಾಯಣ, ರಾಮ ಪಟ್ಟಾಭಿಷೇಕ, ಹೊಸಗನ್ನಡ ಸಾಹಿತ್ಯದ ರಸಸೇತುವೆಯಾದವು. ಇದೇ ಸಾರವನ್ನು ಪರಿಪಕ್ವಗೊಳಿಸಿಕೊಂಡು ರಂಬೆ–ಕೊಂಬೆಗಳಾಗಿ ಕವಲೊಡೆದ ಹೊಸಗನ್ನಡ ಸಾಹಿತ್ಯ ನವಿರಾಗಿ ಬೆಳೆದಂತೆ ಕಾಲಘಟ್ಟಕ್ಕೆ ಅನುಗುಣವಾಗಿ ಪ್ರಕಾರಸಾಹಿತ್ಯ ರೂಪದಲ್ಲಿ ತನ್ನನ್ನು ವ್ಯಾಪಿಸಿಕೊಂಡಿತು.

20ನೇ ಶತಮಾನದ ಆಧುನಿಕತೆಯ ಹೊಸ್ತಿಲಲ್ಲಿ, ದೇಶ–ಭಾಷೆ ಮತ್ತು ಸ್ವಾತಂತ್ರ್ಯ ಚಳುವಳಿಯ ಪ್ರೇರಕಶಕ್ತಿಯಾಗಿ ಆರಂಭಗೊಂಡ ನವೋದಯ ಸಾಹಿತ್ಯ, ಸಮಾನತೆಯ ನೆಲೆಯಲ್ಲಿ ರೂಪುತಳಿದ ಪ್ರಗತಿಶೀಲ ಸಹಿತ್ಯ ವಾಸ್ತವತೆಯೊಂದಿಗೆ ಹೊರಹೊಮ್ಮಿದ ನವ್ಯಸಾಹಿತ್ಯ, ಶೋಷಿತರ ದನಿಯಾಗಿ ನಿಂತ ದಲಿತ–ಬಂಡಯ ಸಾಹಿತ್ಯ, ಮಹಿಳಾ ಪರವಾಗಿ ನಿಂತ ಸ್ತ್ರೀವಾದಿಸಾಹಿತ್ಯ ಹೀಗೆ ಆಧಿನಿಕೋತ್ತರ ಕನ್ನಡ ಸಾಹಿತ್ಯ ತನ್ನ ಕಾಲಘಟ್ಟದ ಪರದಿಯೊಳಗೆ ಸೃಜನಾತ್ಮಕವಾಗಿ ಹರಿದು ಬರುತ್ತಿರುವುದನ್ನು ಕಾಣಬಹುದು.

ಹೀಗೆ ಸಾಹಿತ್ಯ ಪಂಥಗಳೋಪಾದಿಯಾಗಿ ಬೆಳೆದು ಬಂದ ಕನ್ನಡ ಸಾಹಿತ್ಯ ಕಾವ್ಯ, ನಾಟಕ, ಕಥೆ, ಕಾದಂಬರಿ, ಭಾವಗೀತೆ, ಲಲಿತ ಪ್ರಬಂಧ, ಆತ್ಮಕಥೆ, ಜೀವನಚರಿತ್ರೆ, ಪ್ರವಾಸಕಥನಾ, ಸಂಶೋಧನೆ ವಿಮರ್ಶೆ, ಮುಂತಾದ ಪ್ರಕಾರ ಸಾಹಿತ್ಯವಾಗಿ ಕವಲೊಡೆದು ತನ್ನ ಒಡಲಿನಲ್ಲಿ ಕವಿಗಳು, ಕಥೆಗಾರರು, ಕಾದಂಬರಿಕಾರರು, ನಾಟಕಗಾರರು, ಸಂಶೋಧಕರು, ವಿಮರ್ಶಕರನ್ನು ಪೋಷಿಸಿ ಬೆಳೆಸುವುದರ ಜೊತೆಯಲ್ಲಿ ತಾನು ನವಿರಾಗಿ ಬೆಳೆಯುತ್ತಿರುವುದು ಸಾಹಿತ್ಯದ ಜೀವಂತಿಕೆಗೆ ಸಾಕ್ಷಿಯಾಗಿದೆ.

20ನೇ ಶತಮಾನದ ನವೋದಯ ಸಾಹಿತ್ಯದ ಹೊಸ್ತಿಲಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಕಥೆಗಳು, ನಾಟಕ, ಕಾವ್ಯ, ಕಾದಂಬರಿ, ಹೀಗೆ ಪ್ರಕಾರ ಸಾಹಿತ್ಯಗಳು ಕವಲೊಡೆದು ಸೃಜನಶೀಲವಾಗಿ ಬೆಳೆದಂತೆ ಕವಿಯು ತನ್ನ ಕಥೆ, ಕಾದಂಬರಿಗಳಂತೆಯೇ ತನ್ನ ಬದುಕಿನ ಬಹುಮುಖ್ಯ ಘಟನೆಗಳನ್ನು ಮುಕ್ತವಾಗಿ ಆತ್ಮಕಥೆ, ಜೀವನ ಚರಿತ್ರೆಯ ರೂಪದಲ್ಲಿ ಬರೆದುಕೊಳ್ಳಲಾರಂಬಿಸಿದನು. ಅಂತೆಯೇ ಆತ್ಮಕಥೆಗಳು, ಕಥೆ, ಕಾದಂಬರಿಗಳಂತೆಯೇ ಪ್ರಕಾರ ಸಾಹಿತ್ಯದ ರೂಪ ಪಡೆದು ಸಾಹಿತ್ಯದಲ್ಲಿ ತಮ್ಮ ಚಾಪನ್ನು ಮೂಡಿಸಿದವು.

ಮುಖ್ಯವಾಗಿ ಕಥೆ ಬರೆಯುವ ಕಥೆಗಾರನೊಬ್ಬ ತನ್ನ ವಾಸ್ತವ ಬದುಕಿಗೆ ಹತ್ತಿರವಾಗಿ ತನ್ನ ಆತ್ಮಕಥೆಯನ್ನು ಬರೆದುಕೊಳ್ಳುವ ಎಲ್ಲಾ ಸಾಧ್ಯತೆಯು ಒದಗಿರಬಹುದು ಹಾಗಾಗಿ ಆತ್ಮಕಥೆಗಳು ಇತ್ತೀಚೆಗೆ ಪ್ರಕಾರ ಸಹಿತ್ಯವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗಿದೆ. ಯಾಕೆಂದರೆ ಜೀವನ ಚರಿತ್ರೆಯಂತೆಯೇ ಆತ್ಮ ಚರಿತ್ರೆಗಳೂ ಕನ್ನಡ ಸಾಹಿತ್ಯದ ಅಪರೂಪದ ಸಾಹಿತ್ಯ ಪ್ರಕಾರವಾಗಿ ತಮ್ಮ ಇರುವಿಕೆಯನ್ನು ರುಜುವಾತು ಪಡಿಸುವಲ್ಲಿ ಯಶಸ್ವಿಯಾಗಿವೆ.

ಯಾವುದೆ ವ್ಯಕ್ತಿ ತನ್ನ ಬದುಕನ್ನು ತಾನೇ ಸಮೀಕ್ಷೆ ನಡೆಸಿ ಮುಕ್ತ ಮನಸ್ಸಿನಿಂದ ತನ್ನ ಬದುಕಿನ ಪುಟುಗಳನ್ನು ಬರೆದುಕೊಳ್ಳುವುದು ಆತ್ಮಕಥೆ ಎನಿಸಿಕೊಳ್ಳುತ್ತದೆ. ಕೆಲವೊಮ್ಮೆ ಆತ್ಮಕಥೆಯಾಗಬಹುದಾಗಿದ್ದ ಒಂದು ಕೃತಿ ಕಾದಂಬರಿಯಾಗುವ ಸಾಧ್ಯತೆಗಳು ಒದಗಬಹುದು ಉದಾ:- ಕುವೆಂಪುರವರ ನೆನಪಿನ ದೋಣಿ ಆತ್ಮಕಥೆಗಿಂತ ಅವರ ಮಲೆಗಳಲ್ಲಿ ಮಧುಮಗಳು, ಕಾನೂರು ಸುಬ್ಬಮ್ಮ ಹೆಗ್ಗಡತಿ ಕಾದಂಬರಿಗಳು ಕುವೆಂಪು ಅವರ ಆತ್ಮಕಥೆಗಳಾಗಿ ಕಾಣುವ ಎಲ್ಲಾ ಸಾಧ್ಯತೆಗಳನ್ನು ಪದೆದುಕೊಳ್ಳುತ್ತವೆ. ಹಾಗೆಯೇ ಎಚ್.ಎಲ್. ನಾಗೇಗೌಡರ 'ದೊಡ್ಡಮನೆ' ಕಾದಂಬರಿ ಅತ್ಮಕಥೆಯ ರೂಪದಲ್ಲಿಯೇ ತೆರೆದುಕೊಳ್ಳುತ್ತದೆ.

ಆದರೆ ಪ್ರಕಾರ ಸಾಹಿತ್ಯವಾಗಿ ಆತ್ಮಕಥೆಗಳನ್ನು ಅವಲೋಕಿಸುವಾಗ ಸಂದಿಗ್ಧ ಪರಿಸ್ಥಿತಿಯೂ ಎದುರಾಗುತ್ತದೆ. ಏಕೆಂದರೆ ಆತ್ಮಕಥೆಗಳು ಪ್ರಕಾರ ಸಹಿತ್ಯವೇ ಅಲ್ಲ ಎಂಬ ಕೂಗು ಕೇಳುತ್ತಿದ್ದ ಸಂದರ್ಭದಲ್ಲಿ ಅಲ್ಲೊಂದು ಇಲ್ಲೊಂದು ಆತ್ಮಕಥೆಗಳು ಕಾಣಿಸೊಕೊಳ್ಳತೊಡಗಿದವಾದರೂ ನವ್ಯ ದಲಿತ-ಬಂಡಯದ ಹೊತ್ತಿಗೆ ಆತ್ಮಕಥೆಗಳು ಪ್ರಕಾರ ಸಾಹಿತ್ಯವಾಗಿ ತಮ್ಮ ಇರುವಿಕೆಯ ಛಾಪನ್ನು ಮೂಡಿಸತೊಡಗಿದವು.

ಆರಂಭದ ನವೋದಯ ಸಾಹಿತ್ಯದಲ್ಲಿ ಪ್ರಕಾರ ಸಾಹಿತ್ಯವಾಗಿ ಕಥೆ, ಕಾದಂಬರಿ, ಕಾವ್ಯ, ನಾಟಕಕ್ಕೆ ಸಿಕ್ಕ ಓದುಗ ಒಲವೂ ಆತ್ಮಕಥೆಗಳಿಗೆ ಸಿಗಲಿಲ್ಲದಿದ್ದರೂ, ಸಾಹಿತ್ಯ ಸೃಜನಶೀಲವಾಗಿ ಬೆಳೆದಂತೆ ಆತ್ಮಕಥೆಗಳು ತಮ್ಮ ವಿಶಿಷ್ಟತೆಯನ್ನು ಮೆರೆಯತೊಡಗಿದವು. ಕವಿ, ಕಲಾವಿದ, ಕಾರ್ಮಿಕ, ಕ್ರೀಡಾಪಟು, ಪ್ರತ್ರಿಕೋದ್ಯಮಿ, ರಾಜಕಾರಣಿ, ಮಠಾಧೀಶರು ಹೀಗೆ ಎಲ್ಲಾ ಕ್ಷೇತ್ರಗಳಲ್ಲಿಯೂ ಆತ್ಮಕಥೆಗಳು ವ್ಯಾಪಕವಾಗಿ ತೆರೆದುಕೊಳ್ಳತೊಡಗಿದವು.

ಆತ್ಮಕಥೆಗಳ ಉದ್ದೇಶ ಕೀರ್ತಿ, ಪ್ರತಿಷ್ಠೆ, ಮಾನವೀಯ ಮೌಲ್ಯಗಳ ಪ್ರಸಾರದ ಅಪೇಕ್ಷಣೆ ಇಲ್ಲವೆ ತಮ್ಮ ಸಮಾಜ, ಪರಿಸರದ ವಿದ್ಯಾಮಾನಗಳನ್ನು ದಾಖಲಿಸುವ

ಇಚ್ಛೆಯಿಂದ ಬಹುತೇಕ ಆತ್ಮಕಥೆಗಳು ರೂಪುತಳೆದಿರುವುದನ್ನು ಕಾಣಬಹುದು. ಬಹಳ ಮುಖ್ಯವಾಗಿ ಆತ್ಮಕಥೆಗಳು, ಘಟನಾ ಪ್ರಧಾನವಾಗಿರುತ್ತವೆ. ಜೊತೆಗೆ ನೇರ ನಿರಾಡಂಬರ, ನಿರೂಪಣಾ ಶೈಲಿಯಿಂದ ಉತ್ತಮ ಸಾಹಿತ್ಯ ಸ್ವರೂಪವನ್ನು ಪದೆದುಕೊಂಡಿರುತ್ತವೆ. ಆತ್ಮಕಥೆಗಳು ಸಮಾನ್ಯವಾಗಿ ಏಕವ್ಯಕ್ತಿ ರಚನೆಗಳಾದರೂ ಇವುಗಳ ವಿಷಯದ ವ್ಯಾಪ್ತಿ ಸಮಾಜದ ಸಮಕಾಲೀನ ಮತ್ತು ಚಾರತ್ರಿಕ ಸಂಗತಿಗಳಾದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹೀಗೆ ಹತ್ತು ಹಲವು ಮುಖಗಳನ್ನು ಅನಾವರಣಗೊಳಿಸುತ್ತವೆ,

ವ್ಯಕ್ತಿಯೊಬ್ಬ ತಾನು ಬದುಕಿದ ರೀತಿಯನ್ನು ತಾನೇ ಬರೆದುಕೊಂಡರೆ ಅದು ಆತ್ಮಕಥೆಯಾಗುತ್ತದೆ. ಹೀಗೆ ಆತ್ಮಕಥೆಗಳ ಆಧುನಿಕ ಸಾಹಿತ್ಯದಲ್ಲಿ ರೂಪುಗೊಳ್ಳುವಾಗ ಅವುಗಳು ಸಾಮಾಗ್ರಿಯಾಗಿ ದಿನಚರಿಯ ಮುಂದುವರಿಕೆಯೇ ಆತ್ಮಕಥೆಯಾಗಬಹುದಾದ ಸಾಧ್ಯತೆಯನ್ನು ಪದೆದಿರುತ್ತಿದ್ದವು. ಆದರೂ ಅವುಗಳನ್ನು ಆತ್ಮಕಥೆಗಳೆಂದು ಕರೆಯಲಾಗುತ್ತಿರಲಿಲ್ಲ. ಇದರ ಜೊತೆಗೆ ಪತ್ರಗಳು, ಜರ್ನಲ್ ಗಳಂಥ ಪ್ರಮುಖ ಆಕರಗಳ ಸಹಾಯದಿಂದ ಆತ್ಮಕಥೆಗಳು ಸಿದ್ಧವಾಗುತ್ತಿದ್ದವು. ಬಹುತೇಕ ಆತ್ಮಕಥೆಗಲು ಜೀವನ ಚರಿತ್ರೆಯಲ್ಲಿ ಸೇರಿಹೋಗಿರುತ್ತಿದ್ದವು. ಬಹುತೇಕ ಆತ್ಮಕಥೆಗಲು ಜೀವನ ಚರಿತ್ರೆಯಲ್ಲಿ ಸೇರಿ ಹೋಗಿರುತ್ತವೆಯೇ ಹೊರತು ದಿನಚರಿಯಂತೆ ಸ್ವತಂತ್ರ ಅಸ್ತಿತ್ವ ಪಡೆದುಕೊಂಡಿರುತ್ತಿರಲಿಲ್ಲ ( ಕನ್ನಡ ದಾಖಲು ಸಾಹಿತ್ಯ: ಕೆ. ರವೀಂದ್ರನಾಥ, ಕ.ವಿ.ವಿ. ಹಂಪಿ, ಪುಟ 99)

ಆತ್ಮಕಥೆಗಳು ಅನ್ಯರಿಂದ ರಚನೆಗೊಳ್ಳದೆ, ವ್ಯಕ್ತಿಯೊಬ್ಬ ತನ್ನ ಬದುಕನ್ನು ಕುರಿತು ತಾನೇ ಸಿಂಹಾವಲೋಕನ ಮಾಡಿಕೊಂಡ ಜೀವನದ ಕಥೆ. ಹಾಗಾಗಿ ವಾಸವದ ಜೊತೆಗೆ ಕಲಾತ್ಮಕಥೆ ಈ ಸಾಹಿತ್ಯ ರಚನೆಯ ಜೀವನಾಡಿ ಎಂದರೆ ತಪ್ಪಾಗಲಾರದು. ಅಂತೆಯೇ ನವೋದಯ, ಪ್ರಗತಿಶೀಲ,ನವ್ಯ, ದಲಿತ ಬಂಡಾಯ ಸಾಹಿತ್ಯ ಘಟ್ಟದಲ್ಲಿ ನಮಗೆ ಹೆಚ್ಚಾಗಿ ಆತ್ಮಕಥೆಗಳು ಕಾಣಿಸಿಕೊಳ್ಳುವುದು ನವೋದಯ ಮತ್ತು ದಲಿತ-ಬಂಡಾಯ ಕಾಲಘಟ್ಟದಲ್ಲಿ ಅದರಲ್ಲಿಯ ನವೋದಯ ಕಾಲ ಘಟ್ಟದ ಆತ್ಮಕಥೆಗಳಿಗಿಂತ ದಲಿತ-ಬಂಡಾಯ ಸಂದರ್ಭದ ಆತ್ಮಕಥೆಗಳು ಹೆಚ್ಚು ಭಿನ್ನವಾಗಿ ಓದುಗರ ಮನ ಸೆಳೆಯುತ್ತವೆ. ಕಾರಣ ದಲಿತ ಆತ್ಮಕಥೆಗಳ ಮನ ತೆರೆದುಕೊಳ್ಳುವಿಕೆಯಲ್ಲಿ ಯಾವುದೇ ಕಲಾತ್ಮಕ ವೇದಿಕೆ ಸೃಷ್ಟಿಯಾಗದೆ ನೈಜ, ವಾಸ್ತವ ಸಂಗತಿಗಳನ್ನು, ನೋವು,ಅಪಮಾನ, ಶೋಷಣೆಯ ಸುರುಳಿಗಳನ್ನು ಹಸಿಹಸಿಯಾಗಿ ಬಿಡಿಸುತ್ತಾ ಸಾಮಾಜಿಕ ಕನ್ನಡಿಯಂತೆ ದಲಿತ ಆತ್ಮಕಥೆಗಳು ಪ್ರತಿಬಿಂಬಿಸುತ್ತವೆ.

ಮುಖ್ಯವಾಗಿ ಒಬ್ಬ ವ್ಯಕ್ತಿ ಬದುಕಿನುದ್ದಕ್ಕೂ ಅನುಸರಿಸಿದ ಜೀವನ ಪದ್ಧತಿ, ಆಚರಣೆಗೆ ತಂದ ತತ್ವಸಿದ್ಧಾಂತ, ಕಂಡುಂಡ ಅನುಭವಗಳಂತಹ ವಾಸ್ತವ ಸಂಗತಿಗಳ ಕಲಾತ್ಮಕ ಸಾಹಿತ್ಯವಾಗಿ ಆತ್ಮಕಥೆಗಳು ಗೋಚರಿಸಿದರು. ಬಹುತೇಕ ಆತ್ಮಕಥೆಗಳು ವಸ್ತು ಸ್ಥಿತಿ ದೃಷ್ಟಿಯಿಂದ ಕೆಲವು ಸಂದೇಹಗಳಿಗೆ ಎಡೆಮಾಡುತ್ತವೆ. ಉದಾಹರಣೆಗೆ: ಆತ್ಮಕಥೆಗಾರರಲ್ಲಿ ಕೆಲವರು ಬದುಕಿನ ಉತ್ತಮ ಸ್ಥಿತಿಯನ್ನು ಅನುಭವಿಸಿದರೂ ನಿರ್ಗತಿಕರಂತೆ ತಮ್ಮ ಹುಸಿ ಅನುಭವಗಳನ್ನುಬರೆದುಕೊಂಡರೆ ಇನ್ನೂ ಕೆಲವರು ತಮ್ಮ ಬಡತನದ ದಾರುಣತೆಯನ್ನು ಹೇಳಿಕೊಳ್ಳಲಾಗಿದೆ. ತಮ್ಮ ನೈಜತೆಯ ಬದುಕನ್ನೆ ಮರೆಮಾಚುತ್ತಾರೆ. ಇಂತಹ ಸ್ಥಿತಿಯಲ್ಲಿ ಆತ್ಮಕಥೆಗಳು ಪ್ರಾಮಾಣಿಕತೆಯೆಡೆಗೆ ಮುಖಮಾಡುವುದು ದು:ಸ್ಥರವಾಗುತ್ತಿದೆ.

ಬದುಕು ಅರ್ಥಪೂರ್ಣವಾಗಬೇಕಾದರೆ ವಾಸ್ತವದ ಅರಿವಿರಬೇಕು. ಜೀವನದಲ್ಲಿ ಬಂದ ಕಷ್ಟನಷ್ಟಗಳನ್ನು ಧೈರ್ಯವಾಗಿ ಎದುರಿಸುವ ಮನೋಸ್ಥೈರ್ಯ ನಮ್ಮಲಿರಬೇಕು. ನಾವು ಕಲ್ಪನೆ ಮಾಡಿಕೊಂಡಂತೆ ಬಾಳಿನಲ್ಲಿ ಗುರಿ ತಲುಪಬಹುದು. ಹೀಗೆ ತಮ್ಮನ್ನು ತಾವು ಆತ್ಮಾವಲೋಕನ ಮಾಡಿಕೊಳ್ಳುವ ಮೂಲಕ ಇತರರಿಗೂ ಮಾರ್ಗದರ್ಶಕವಾಗಿ ಆತ್ಮಕಥೆಗಳು ಬೆಳೆದಿವೆ. ಇಲ್ಲಿ ಕೇವಲ ಜೀವನದ ಸರಿದಾರಿಯ ವಿವರಣೆ ಮಾತ್ರ

ಇರುವುದಿಲ್ಲಜೊತೆಗೆ ಬದುಕಿನ ಎಡರು ತೊಡರುಗಳುಅಸ್ಥಿತ್ವದ ಹೋರಾಟಗಳು ಆತ್ಮಕಥೆಯಲ್ಲಿ ದಾಖಲಾಗುವ ಮೂಲಕ ಪ್ರಜ್ಞಾವಂತರಲ್ಲಿ ಬದಲಾವಣೆಯ ಗಾಳಿಯನ್ನು ಬೀಸಿವೆ ಅಲ್ಲದೆ ಓದುಗರಲ್ಲಿ ಆತ್ಮಸ್ಥೈರ್ಯವನ್ನು ತುಂಬುತ್ತಾ ಬೆಳೆಯುತ್ತಿವೆ ಹಾಗಾಗಿ ಆಯಾಯ ಕ್ಷೇತ್ರದಲ್ಲಿ ಸೇವೆಗೈದ ಎಷ್ಟೋ ಕವಿಗಳು , ವಿದ್ವಾಂಸರು, ತತ್ವಜ್ಞಾನಿಗಳು, ರಾಜಕಾರಣಿಗಳು, ರಂಗಕಲಾವಿದರು, ತಂತ್ರಜ್ಞರು ಇನ್ನೂ ಮುಂತಾದವರ ಆತ್ಮಕಥೆಗಳಲ್ಲಿನ ಕಹಿ ಅನುಭವಗಳೇ ಇತರರಿಗೆ ಸೋಪಾನವಾಗಿರುವುದನ್ನು ಹಾಗೂ ಅತಿಯಾದ ಸಂಕಷ್ಟಗಳೇ ಸಂತೋಷಕ್ಕೆ ಕಾರಣವಾದ ಬಗೆಯನ್ನು ತುಂಬಾ ಸ್ವಾರಸ್ಯಕರವಾಗಿ ಅಭಿವ್ಯಕ್ತಗೊಳಿಸುವ ಆತ್ಮಕಥೆಗಳು ಬದುಕಿನ ಅನುಭವಗಳನ್ನು ನಿರ್ಭಿಡತೆಯಿಂದ ಹೇಳುವ ಔದಾರ್ಯವನ್ನು ತೋರುತ್ತವೆ.

ಹೀಗೆ ಆಧುನಿಕತೆಯೊಟ್ಟಿಗೆ ರೂಪತಳೆದು ಪ್ರಕಾರ ಸಾಹಿತ್ಯವಾಗಿ ಸಾಹಿತ್ಯದ ಎಲ್ಲಾ ಕಾಲಘಟ್ಟಗಳಲ್ಲೂ ಬೆಳೆದು ಬಂದ ಆತ್ಮಕಥೆಗಳು ಕವಿ, ಕಲಾವಿದರ ಬದುಕಿನ ನೈಜತೆಯನ್ನು ಸಾರುವಲ್ಲಿ ಯಶಸ್ವಿಯಾಗಿವೆಯಾದರೂ, ಒಂದು ಕಾವ್ಯ ಅಥವಾ ಕಾದಂಬರಿ ನೀಡಬಹುದಾದ ರಸಾನುಭೂತಿ ಮತ್ತು ರಸಪಥದ ಸಂಗತಿಗಳು ಆತ್ಮಕಥೆಯಲ್ಲಿ ಕಲಾತ್ಮಕತೆ ಪಡೆಯದೆ ಕೇವಲ ನೈಜತೆಗೆ ಒಪ್ಪಿಕೊಂಡು ಓದುಗನ ಮನಸ್ಸನ್ನು ಆವರಿಸಿಬಿಡುತ್ತವೆ.

ಒಂದು ಕಾವ್ಯವನ್ನು , ಒಂದು ಕಾದಂಬರಿ ಅಥವಾ ನಾಟಕವನ್ನು ಓದಿದ ಅಥವಾ ನೋಡಿದ ಅನುಭವವನ್ನು ಕಟ್ಟಿಕೊಡುವಲ್ಲಿ ಆತ್ಮಕಥೆಗಳು ವಿಫಲಗೊಂಡಿವೆ. ಯಾಕೆಂದರೆ ಆತ್ಮಕಥೆಗಳಿಗೆ ಕಥೆ, ಕಾದಂಬರಿಗಳಿಗಿರುವಂತೆ ಪ್ರತ್ಯೇಕ ಓದುಗವಲಯ ಸೃಷ್ಟಿಯಾಗಲಿಲ್ಲ. ಅಲ್ಲದೆ ವಿಮರ್ಶಕರ ಟೀಕೆ ಟಿಪ್ಪಣಿಗೆ ಗುರಿಯಾಗಲಿಲ್ಲ. ಇವೆಲ್ಲದರ ನಡುವೆಯೂ ಕನ್ನಡ ಸಾಹಿತ್ಯದಲ್ಲಿ ವಿರಳವಾಗಿ ಸಿಗುವ ಆತ್ಮಕಥೆಗಳು ಹೆಚ್ಚು ಪುಷ್ಟಿದಯಕವೆನಿಸುತ್ತವೆ. ಯಾಕೆಂದರೆ ಇತರ ಸಾಹಿತ್ಯಕ್ಕೆ ಸಿಕ್ಕ ಬಿರುದು ಪ್ರಶಸ್ತಿಗಳು, ಅಬ್ಬರದ ಪ್ರಚಾರ ಆತ್ಮಕಥೆಗಳಿಗೆ ಸಿಗದಿದ್ದರೂ ಪ್ರಕಾರ ಸಾಹಿತ್ಯವಾಗಿ ತಮ್ಮನ್ನು ಗುರುತಿಸಿಕೊಳ್ಳಲು ಯಶಸ್ವಿಯಾಗಿವೆ.

ಒಟ್ಟಾರೆಯಾಗಿ ಪ್ರಕಾರ ಸಾಹಿತ್ಯವಾಗಿ ಆತ್ಮಕಥೆಗಳನ್ನು ಅವಲೋಕಿಸುವಾಗ ಇತರ ಭಾರತೀಯ ಸಾಹಿತ್ಯಕ್ಕೆ ಹೋಲಿಸಿಕೊಂಡರೆ ಕನ್ನಡ ಸಾಹಿತ್ಯದಲ್ಲಿನ ಆತ್ಮಕಥೆಗಳ

ಸಂಖ್ಯೆ ಕಡಿಮೆಯೇ ಯಾಕೆಂದರೆ ಇತರ ಪ್ರಕಾರ ಸಾಹಿತ್ಯದಂತೆ ಆತ್ಮಕಥೆಗಳು ಸಮೃದ್ಧಿಯಾಗಿ ಬೆಳೆಯುವ ಸ್ಥಿತಿ ನಿರ್ಮಾಣವಾಗಲಿಲ್ಲ,ಅಲ್ಲದೆ, ಕನ್ನಡ ಸಾಹಿತ್ಯದಲ್ಲಿ ಆತ್ಮಕಥೆಯಲ್ಲಿಯೇ ಬೇರೆ ಬೇರೆ ಪ್ರಕಾರಗಳು ಹುಟ್ಟಲಿಲ್ಲ. ಆತ್ಮಕಥೆ ಬರದೇ ಬದುಕಿದ ಯಾವುದೇ ವ್ಯಕ್ತಿಯ ಉದಾಹರಣೆ ಇಲ್ಲ. ಹಾಗಾಗಿ ಆತ್ಮಕಥೆಗಳು ಜನಪ್ರಿಯತೆಯಿಂದ, ಓದುಗವಲಯದಿಂದ ದೂರವೇ ಉಳಿದವು. ಇವೆಲ್ಲದರ ನಡೆವೆಯೂ ಆತ್ಮಕಥೆಗಳು ಪ್ರಕಾರ ಸಾಹಿತ್ಯವಾಗಿ ಕನ್ನಡ ಸಾಹಿತ್ಯದಲ್ಲಿ ಸ್ಥಾನ ಪಡೆದು ಇಂದಿಗೂ ತನ್ನ ಇರುವಿಕೆಯ ಬೇರನ್ನು ಚಾಚುತ್ತಲೇ ಇರುವುದು ಹೆಮ್ಮೆಯ ಸಂಗತಿ.

ಅಡಿ ಟಿಪ್ಪಣಿಗಳು

೧. ದಶಕದ ಕನ್ನಡ ಸಾಹಿತ್ಯ: ಸಂ. ಎಫ್. ಟಿ. ಹಳ್ಳಿಕೇರಿ, ವಿಮರ್ಶಾಲೇಖನ ಪುಟ –೨೭
೨. ಕನ್ನಡ ದಲಿತ ಸಾಹಿತ್ಯ :ಸಂ.ಡಾ॥ ಅರ್ಜುನಗೊಳಸಂಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ೨೦೦೩.
೩. ಕನ್ನಡ ವಿಶ್ವಕೋಶ: ಸಂ.ಡಾ॥ಅರವಿಂದ ಮಾಲಗತ್ತಿ; ಮೈಸೂರುವಿಶ್ವವಿದ್ಯಾನಿಲಯ ( ಪ್ರಸಾರಂಗ)

# ಅಧ್ಯಾಯ - ೨

## ಕನ್ನಡ ಸಾಹಿತ್ಯದಲ್ಲಿನ ಆತ್ಮಕಥೆಗಳ ಸಮೀಕ್ಷೆ

ಆಧುನಿಕ ಕನ್ನದ ಸಾಹಿತ್ಯದಲ್ಲಿನ ಆತ್ಮಕಥೆಗಳ ಸಮೀಕ್ಷೆ ಮಾಡುವುದಕ್ಕಿಂತ ಮೊದಲು ಆತ್ಮಕಥೆಗಳ ಬೀಜ ರೂಪವನ್ನು ಹೆಕ್ಕಿ ತೆಗೆಯುವುದು ಅಗತ್ಯವಾಗಿದೆ. ಮೊದಲಿಗೆ ಯೂರೋಪ್ ಖಂಡದಲ್ಲಿ ಆತ್ಮ ಪರಿಶೋಧನೆಯ ನೆಲೆಯಲ್ಲಿ ಆತ್ಮಚರಿತ್ರೆಯ ಅಂಶವುಳ್ಳ ಅನೇಕ ಕೃತಿಗಳು ಬರೆಯಲ್ಪಟ್ಟವು. ಈ ಹಿನ್ನೆಲೆಯಲ್ಲಿ ಪಾಶ್ಚಾತ್ಯ ಸಾಹಿತ್ಯದಲ್ಲಿ ಆತ್ಮಕಥೆಗಳ ಬೀಜರೂಪ ಮೊಳೆಯತೊಡಗಿತು. ಅಂತೆಯೇ ಈಗ ದೊರೆತಿರುವ ಆತ್ಮಕಥೆಗಳ ಆಧಾರದ ಮೇಲೆ ಕ್ರಿ.ಪೂ.120–80ರ ಅವಧಿಯಲ್ಲಿ ಜೀವಿಸಿದ್ದ 'ಮಾರ್ಕಸ್ ಅರೀಲಿಯಸ್' ಎಂಬ ರಾಜನ 'ಮೆಡಿಟೇಷನ್ಸ್' ಎಂಬ ಕೃತಿಯೇ ಆತ್ಮಕಥೆಯಾಗಿ ದಾಖಲಾದ ಮೊದಲ ಕೃತಿ. ನಂತರ 'ಸೆಂಟ್ ಆಗಸ್ಟೀನ್' ಎಂಬುವವನು 'ಕನ್ ಫೇಷನ್ಸ್' ಎಂಬ ಆತ್ಮಕಥೆಯನ್ನು ರಚಿಸಿದನು.

ಹೀಗೆ ಪಾಶ್ಚಾತ್ಯ ಸಾಹಿತ್ಯದಲ್ಲಿ ಆರಂಭವಾದ ಆತ್ಮಕಥೆಗಳು 19–20ನೇ ಶತಮಾನದ ಹೊಸ್ತಿಲಲ್ಲಿ ಭಾರತೀಯ ಎಲ್ಲಾ ಬಾಷೆಗಳಲ್ಲಿಯೂ ಕವಲೊಡೆಯತೊಡಗಿದವು. ಈ ನಿಟ್ಟಿನಲ್ಲಿ ರೂಪು ತಳೆದ ಆತ್ಮ ಕಥೆಗಳು ಒಮ್ಮೊಮ್ಮೆ ಆತ್ಮಚರಿತ್ರೆಗಳ ನೆಲೆಯಲ್ಲಿ ಸಾಗುವುದರಿಂದ, ಇವೆರಡನ್ನು ಒಂದೇ ನಾಣ್ಯದ ಎರಡು ಮುಖಗಳೆಂದು ಕರೆಯಬಹುದು. ಹಾಗಾಗಿಯೇ ಪಾಶ್ಚಾತ್ಯ ವಿದ್ವಾಂಸ ಜಾನ್‌ಸನ್ 'ಆತ್ಮಚರಿತ್ರೆಯೇ ಅತ್ಯುತ್ತಮ ಜೀವನ ಚರಿತ್ರೆ' ಎಂದು ಅಭಿಪ್ರಾಯಿಸಿದ್ದಾರೆ.

ಯೂರೋಪ್ ಖಂಡದಲ್ಲಿ ಆತ್ಮಕಥೆಗಳ ಹುಟ್ಟು ಮತ್ತು ಬೆಳವಣಿಗೆಗೆ ಕ್ರೈಸ್ತಮತದ ಮುಖ್ಯ ಅಂಶಗಳಲ್ಲೊಂದಾದ ಪಾಪನಿವೇದನೆಯು ಮೂಲ ಕಾರಣವಾಗಿದೆ. ಹಾಗಾಗಿ ಕೆಲವರು ತಮ್ಮ ಪ್ರಾಯಶ್ಚಿತ್ತ ಎನ್ನುವ ರೀತಿಯಲ್ಲಿ ಆತ್ಮಕಥೆಯನ್ನು ಬರೆದಿದ್ದುಂಟು. ಇದಕ್ಕೆ ವ್ಯತಿರಿಕ್ತವಾಗಿ 'ಆಲೂರು ವೆಂಕಟರಾಯರು ನಾನು ಆತ್ಮಕಥೆ ಬರೆಯುವಾಗ ಅಹಂಕಾರದಿಂದ ಉಬ್ಬಿಯೂ ಹೋಗಬಾರದೆಂದು ವಿನಯಾತಿರೇಕದಿಂದ ನಿಷ್ಕಾರಣವಾಗಿ ತಗ್ಗಿಯೂ ಹೋಗಬಾರದೆಂದು ನಿಶ್ಚಯಮಾಡಿದ್ದೇನೆ, ಹಾಗಾಗಿ ಆತ್ಮಚರಿತ್ರೆಯನ್ನು ಬರೆಯಲು ಬೇಕಾಗುವುದು ನಮಗೆ ನೆನಪಿನ ಶಕ್ತಿ ಮತ್ತು ಆತ್ಮಸ್ಥೈರ್ಯ ಮಾತ್ರ.

ಬಾಳಿನಲ್ಲಿ ಅನೇಕ ಹೋರಾಟಗಳನ್ನು ಎದುರಿಸಿ ಜಯಶಾಲಿಯಾದ ಜೀವವೊಂದಕ್ಕೆ ಹಳೆಯ ನೆನಪುಗಳನ್ನು ಮೆಲುಕುಹಾಕಿ ಇತರರೊಂದಿಗೆ ಅನುಭವಗಳನ್ನು ಹಂಚಿಕೊಂಡಾಗ ಅದು ಬಹುಮುಖಿಯಾಗಿರುತ್ತದೆ. ಅಲ್ಲದೇ ವ್ಯಕ್ತಿಗತವಾಗಿ ಆ ಅನುಭವಗಳು ಬದುಕಿನ ಅನುಭವವಾಗುವ ಪರಂಪರೆಯ ಆತ್ಮಕಥೆಯಾಗುತ್ತದೆ ಎಂದು ತಮ್ಮ ಆತ್ಮಕಥೆಯ ಆರಂಭದಲ್ಲಿ ಹೇಳಿಕೊಂಡಿದ್ದಾರೆ.

ಭಾರತೀಯ ಸಾಹಿತ್ಯದಲ್ಲಿ ನಮಗೆ ಆತ್ಮಕಥೆಯ ಬೀಜರೂಪವಾಗಿ ಮೊದಲು ಸಿಗುವುದು ಮಹಾತ್ಮಗಾಂಧೀಜಿಯವರ 'ನನ್ನ ಸತ್ಯಾನ್ವೇಷಣೆ' ಇದರ ಆರಂಭದಲ್ಲಿ ಗಾಂಧೀಜಿ ಆತ್ಮಕಥೆಯನ್ನು ಕುರಿತು 'ನಿಜವಾದ ಆತ್ಮಕಥೆ ಬರೆಯುವ ಪ್ರಯತ್ನ ನನ್ನ ಉದ್ದೇಶವಲ್ಲ, ಸತ್ಯವನ್ನು ಕುರಿತು ನಾನು ನಡೆಸಿದ ಹಲವಾರು ಪ್ರಯೋಗಗಳ ಕಥೆಯನ್ನಷ್ಟೆ ಹೇಳಬಯಸುತ್ತೇನೆ. ಆ ಪ್ರಯೋಗಗಳ ಹೊರತಾಗಿ ನನ್ನ ಬಾಳುವೆಯಲ್ಲಿ ಬೇರಾವುದು ಇಲ್ಲ.ಆದುದರಿಂದ ಈ ಕಥೆ ನನ್ನ ಆತ್ಮಕಥೆಯ ರೂಪತಾಳಿರುವುದು ನಿಜ' (1925 ಡಿಸೆಂಬರ್ 3 ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಉಲ್ಲೇಖ) ಎಂದು ಬರೆಯುತ್ತಾರೆ.

ಹೀಗೆ ಆರಂಭವಾದ ಆತ್ಮಕಥೆಗಳು ತರುವಾಯ ನಿಧಾನವಾಗಿ ಭಾರತೀಯ ಮರಾಠಿ, ತೆಲುಗು, ತಮಿಳು, ಪಂಜಾಬಿ, ಗುಜರಾತಿ, ಕನ್ನಡ ಮುಂತಾದ ಭಾಷೆಗಳಲ್ಲಿ ಆತ್ಮಕಥೆಗಳು ಕಾಣಿಸಿಕೊಳ್ಳತೊಡಗುತ್ತವೆ. ಅಂತೆಯೇ ಕನ್ನಡ ಸಾಹಿತ್ಯದಲ್ಲಿ 19ನೇ ಶತಮಾನದ ತರುವಾಯ ಆಧುನಿಕೋತ್ತರ ಕಾಲದಲ್ಲಿ ಅದರಲ್ಲಿಯ ನವೋದಯ, ದಲಿತ-ಬಂಡಾಯ ಹಾಗು ಸ್ತ್ರೀವಾದಿ ಕಾಲಘಟ್ಟಗಳಲ್ಲಿ ಆತ್ಮಕಥೆಗಳು ಹೆಚ್ಚು ವೈವಿಧ್ಯಮಯವಾಗಿ ಕಾಣಿಸಿಕೊಳ್ಳತೊಡಗಿದವು.

ಆದರೂ ಇತರ ಭಾಷೆಗಳಿಗೆ ಹೋಲಿಸಿದರೆ ಕನ್ನಡ ಸಾಹಿತ್ಯದಲ್ಲಿ ಆತ್ಮಕಥೆಗಳು ಹೆಚ್ಚಾಗಿ ಬೆಳೆದಿಲ್ಲವೆಂಬ ಕೂಗು ಕೇಳುತ್ತಲೇ ಇದೆ. ಕಾರಣ ಈಗ ದಾಖಲಾಗಿರುವ ಆತ್ಮಚರಿತ್ರೆಗಳಿಗೆ ಹೋಲಿಸಿದರೆ ಅರ್ಧದಷ್ಟು ಆತ್ಮಕಥೆಗಳು ಸ್ವತಂತ್ರ ಆತ್ಮಕಥೆಗಳಾದರೆ, ಉಳಿದವು ರಾಷ್ಟ್ರನಾಯಕರುಗಳ ಕಲಾವಿದರ, ಸಾಹಿತಿಗಳ ವಿಜ್ಞಾನಿಗಳನ್ನು ಕುರಿತ ಅನುವಾದಿಗಳಾಗಿ ಸ್ಥಾನ ಪಡೆದಿವೆ.

ಆಧುನಿಕೋತ್ತರ ಕನ್ನಡ ಸಾಹಿತ್ಯದಲ್ಲಿನ ಆತ್ಮಕಥೆಗಳನ್ನು ಅವಲೋಕಿಸಿದಾಗ ನಮಗೆ ನವೋದಯ ಸಾಹಿತ್ಯದ ಕನ್ನಡದ ಆಸ್ತಿ ಎನಿಸಿಕೊಂಡ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರ ಸುಮಾರು 1350 ಪುಟಗಳ ವ್ಯಾಪ್ತಿಯ ಸಂಪುಟಗಳಲ್ಲಿ ಹೊರಹೊಮ್ಮಿರುವ 'ಭಾವ' ( 1968–69) ಆತ್ಮಕಥೆಯು ನಮ್ಮನ್ನು ಸೆಳೆಯುತ್ತದೆ. ಗಾತ್ರದಲ್ಲಿಯೂ, ಪಾತ್ರದಲ್ಲಿಯೂ ಹಿರಿದಾದ ಸ್ಥಾನವನ್ನು ಪಡೆದಿರುವ ಈ ಕೃತಿಯು ಮಾಸ್ತಿಯವರ ಸಾರ್ಥಕ ಬದುಕನ್ನು ಬಿಂಬಿಸುತ್ತದೆ. ಮೊದಲ ಭಾಗದಲ್ಲಿ ತಮ್ಮ ಊರಿಗೆ ಮಾಸ್ತಿ ಹೆಸರು ಬರಲು ಕಾರಣ, ತಮ್ಮ ಬಾಲ್ಯದ ವಿದ್ಯಾಭ್ಯಾಸ, ಆಗಿನ ಕಾಲದ ಸಂಪ್ರದಾಯ, ಆಚರಣೆಗಳನ್ನು ತೆರೆದಿಟ್ಟರೆ, ಎರಡನೆಯ ಭಾಗದಲ್ಲಿ ಅವರ ಅಧಿಕಾರಾವಧಿಯ ಏಕಮುಖ ಚಿತ್ರಣವಿದೆ. ಹಾಗೆಯೇ ಮೂರನೆಯ ಭಾಗದಲ್ಲಿ ಅವರ ವಿಶ್ರಾಂತಿ ಕಾಲದ ಬದುಕಿನ ಜೊತೆಗೆ ತಮ್ಮ ಬದುಕಿನ ಮುಖ್ಯ ಘಟ್ಟಗಳನ್ನು ತೆರೆದಿಡುತ್ತಾ ಹೋಗುತ್ತಾರೆ. ಹೀಗೆ 'ಭಾವ' ಕೃತಿಯ ಮಾಸ್ತಿಯವರ ಆರು ದಶಕದ ಬದುಕನ್ನು ಅನಾವರಣಗೊಳಿಸುತ್ತದೆ.

ಅಂತೆಯೇ ಕನ್ನಡದ ರಾಷ್ಟ್ರಕವಿ ಎನಿಸಿಕೊಂಡ ಕುವೆಂಪು ರವರ 'ನೆನಪಿನ ದೋಣಿಯಲ್ಲಿ' ಆತ್ಮಕಥೆಯ ಅವರ ತುಂಬು ಬದುಕಿನ ಪಯಣವನ್ನು ನೈಜವಾಗಿ ತೆರೆದಿಡುತ್ತಾ ಸಾಗುತ್ತದೆ. ಅಲ್ಲದೆ ಅವರ ಬದುಕಿನ 'ಅನಿಕೇತನ'ದ ಮೌಲ್ಯಗಳು, ವಿಶ್ವಮಾನವತೆಯ ಬದುಕು ಬಿಚ್ಚುಕೊಳ್ಳುತ್ತಾ ಹೋಗುತ್ತದೆ. ಹಾಗೆಯೇ ಶಿವರಾಮಕಾರಂತರ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಆತ್ಮಕಥೆಯು ಕಾರಂತರ ಸಮೃದ್ಧಾನುಭವಕ್ಕೂ ಬಹುಮುಖ ಪ್ರತಿಭೆಗೂ ಜ್ವಲಂತ ಸಾಕ್ಷಿಯಾಗಿ ನಿಲ್ಲುತ್ತದೆ. ತನ್ನ ಬದುಕಿನಲ್ಲಿ ಗುರುವಲ್ಲದೆ, ಗುರಿಯಿಲ್ಲದೆ ಹುಚ್ಚು ಮನಸ್ಸು ತೋರಿದ ದಿಕ್ಕಿನಲ್ಲಿ ಸಾಗಿದ ಇವರ ಬದುಕು, ರಾಷ್ಟ್ರಭಕ್ತಿ, ವ್ಯಾಪಾರ, ಪತ್ರಿಕೋದ್ಯಮ, ಫೋಟೋಗ್ರಫಿ, ನಾಟಕ, ಸಂಗೀತ, ಸ್ವದೇಶಿಚಳುವಳಿ, ಚಲನಚಿತ್ರ, ಸಮಾಜಸುಧಾರಣೆ ಹೀಗೆ ಅವರ ಬದುಕಿನ ಅವತಾರಗಳು ಮುಕ್ತವಾಗಿ ತೆರೆದುಕೊಳ್ಳುತ್ತವೆ. ಹಾಗೆಯೇ ಅವರ ಬದುಕಿನ ಹೋರಾಟ ಸ್ಮೃತಿಪಟಲದಿಂದ ಎಂಬ ಕೃತಿಯ ಮೂಲಕ ಮುಂದುವರೆದ ಭಾಗವಾಗಿ ದಾಖಲಾಗುತ್ತದೆ.

ಜಿ.ಪಿ.ರಾಜರತ್ನಂರವರ 'ಹತ್ತು ವರುಷ' ಎಂಬ ಆತ್ಮಕಥೆ ಅವರ ಹತ್ತು ವರ್ಷಗಳ ಬದುಕನ್ನು ಬಿಂಬಿಸುತ್ತದೆ. ಈ ಕೃತಿಯಲ್ಲಿ ರಾಜರತ್ನಂ ಅಯ್ಯಂಗಾರ್ ರಾಜರತ್ನಂ ಆದುದು "ನಮ್ಮ ನಮ್ಮವರು' ಕೃತಿ ಅಚ್ಚಾದುದು ಈ ಎರಡು ಭಾಗಗಳು ತುಂಬ

ಸ್ವಾರಸ್ಯವಾಗಿ ಮೂಡಿಬಂದಿವೆ. ಹಾಗೆಯೇ ರತ್ನನ ತಂದೆ ತೀರಿಕೊಂಡಾಗ ನಂಟರಾರು ಸಹಕರಿಸದೆ ಶವವನ್ನು ಜಟಕಾಗಾಡಿಯಲ್ಲಿ ತೆಗೆದುಕೊಂಡು ಹೋಗಿ ಶವಸಂಸ್ಕಾರ ಮಾಡಿದ್ದು ತಮ್ಮ ಸತಿಯನ್ನು ಕ್ಷಯದ ಆಸ್ಪತ್ರೆಗೆ ಸೇರಿಸಿ ಹಿಂದಿರುಗುವಾಗ ದಾರಿಯಲ್ಲಿ ಕಂಡ ಹೆಂಡದಂಗಡಿಯ ಅನುಭವವೇ ಅವರ ರತ್ನನ ಪದಗಳಾಗಲು ಕಾರಣವಾದ ಪ್ರಸಂಗಗಳು ಹಸಿ ಹಸಿಯಾಗಿ ಬಿಚ್ಚಿಕೊಳ್ಳುತ್ತವೆ.

ಕನ್ನಡದ ಮಿಂಚಿನಬಳ್ಳಿ ಕಾರ್ಯಾಲಯದಿಂದ ಪ್ರಕಟವಾದ ಸಾಹಿತ್ಯಜ್ಞರ ಆತ್ಮಕಥನ ಕನ್ನಡ ಸಾಹಿತ್ಯದ ವಿಶಿಷ್ಠ ಕೃತಿಯಾಗಿದೆ. ಈ ಕೃತಿಯಲ್ಲಿ ಸುಮಾರು ಹನ್ನೊಂದು ಪ್ರಸಿದ್ಧ ಸಾಹಿತಿಗಳ ವೈವಿದ್ಯಮಯ ಬದುಕಿನ ಅನುಭವದ ಸಾರ ಸಂಗ್ರಹಗೊಂಡಿದೆ. ಗೋವಿಂದಪೈ, ಆರ್.ವಿ.ಜಾಗೀರ್ ದಾರ್, ದೇವುಡು, ನರಸಿಂಹಶಾಸ್ತ್ರಿ, ರಂ. ಶ್ರೀ ಮುಗಳಿ, ಸಿ.ಕೆ.ವೆಂಕಟರಾಮಯ್ಯ, ವಿ.ಕೃ.ಗೋಕಾಕ, ಶಂ.ಭಾ. ಜೋಶಿ, ಉತ್ತಂಗಿ ಚೆನ್ನಪ್ಪ, ಕೃಷ್ಣಶರ್ಮ, ಎ.ಅರ್.ಕೃಷ್ಣಶಾಸ್ತ್ರಿ, ದ.ರಾ.ಬೇಂದ್ರೆ ಮುಂತಾದವರ ಬದುಕಿನ ಪುಟಗಳು ಕೃ ತಿಯ ರೂಪದಲ್ಲಿ ಸಮ್ಮಿಲನಗೊಂಡಿವೆ.

ಹಾಗೆಯೇ ಶ್ರೀರಂಗರು ತಮ್ಮ 'ನಾಟ್ಯನೆನಪುಗಳು' ಎಂಬ ಕೃತಿಯಲ್ಲಿ ತಮಗೂ ಹಾಗೂ ರಂಗಭೂಮಿಗೂ ಇರುವ ಅವಿನಾಭಾವ ಸಂಬಂಧವನ್ನು ಚಿತ್ರಿಸುತ್ತಾರೆ. ಬೇಂದ್ರೆಯವರು ನಡೆದು ಬಂದ ದಾರಿಯ ಮೂರನೆ ಸಂಪುಟದ 'ಚತುರ್ಮುಖ' ಶೀರ್ಷಿಕೆಯಲ್ಲಿ ತಮ್ಮ ಆತ್ಮವೃತ್ತಾಂತವನ್ನು ಬರೆದುಕೊಳ್ಳುತ್ತಾರೆ. ಸಿಂ.ಪಿ.ಲಿಂಗಣ್ಣನವರು ತಮ್ಮ ಮುವತ್ತೈದು ವರ್ಷಗಳು ಎಂಬ ಕೃತಿಯಲ್ಲಿ ತಾವು ಕಂಡುಂಡ ನೋವು ನಲಿವಿನ ಅನುಭವಗಳನ್ನು ತೆರೆದಿಟ್ಟರೆ ಆಲೂರು ವೆಂಕಟರಾಯರ ಜೀವನ ಸ್ಮರಣೆ ಎಂಬ ಗ್ರಂಥದಲ್ಲಿ ಕರ್ನಾಟಕದ ಹೊಸಪ್ರಜ್ಞೆಯ ಬೆಳವಣಿಗೆಯನ್ನು ಕಾಣಬಹುದು.

ಮಧುರ ಚೆನ್ನರ ಆಧ್ಯಾತ್ಮಿಕ ಆತ್ಮಕಥೆಗಳಾದ ಪೂರ್ವರಂಗ,ಕಾಳರಾತ್ರಿ,ಬೆಳಗು, ಆತ್ಮಸಂಶೋಧನೆ,ಪೂರ್ಣಪ್ರಯೋಗದ ಪಥದಲ್ಲಿ ಕೃತಿಗಳು ಆತ್ಮಕಥೆಗಳಾಗಿ ನಮ್ಮ ಗಮನ ಸೆಳೆಯುತ್ತವೆ. ಹಾಗೆಯೇ ಪ್ರಗತಿಶೀಲರಾಗಿ ಗುರುತಿಸಿಕೊಂಡ ಅ.ನ.ಕೃಷ್ಣರಾಯರು ಬರೆದ 'ನನ್ನನ್ನು ನಾನೇ ಕಂಡೆ' ಹಾಗೂ 'ಬರಹಗಾರನ ಬದುಕು' ಆತ್ಮಕಥೆಗಳು ಓದುಗರ ಮನಸ್ಸನ್ನು ಸೂರೆಗೊಳ್ಳುತ್ತವೆ. ಅಲ್ಲದೆ ಶ್ರೀರಂಗರ ತರುಣ ತುರ್ಕಸ್ತಾನ

ಸಾಹಿತಿಯ ಆತ್ಮಜಿಜ್ಞಾಸೆ – ನನ್ನ ನಾಟ್ಯ ನೆನಪುಗಳು, ಬಸವರಾಜ ಕಟ್ಟಿಮನಿಯವರ 'ಕಾದಂಬರಿಕಾರನ ಕಥೆ ಪ್ರಮುಖ ಆತ್ಮಕಥೆಗಳಾಗಿ ನಿಲ್ಲುತ್ತವೆ.

ನವ್ಯಕಾಲದ ಪ್ರಮುಖ ಲೇಖಕರಾದ ಎಂ. ಗೋಪಾಲಕೃಷ್ಣ ಅಡಿಗರು ತಮ್ಮ 'ನೆನಪಿನ ಗಣಿಯಿಂದ' ಆತ್ಮಕಥೆಯನ್ನು ತಮ್ಮ ಬದುಕಿನ ಅನುಭವದ ಕಥನವೆಂದು ಹೇಳಿಕೊಂಡಿ ದ್ದಾರೆ. ಅಡಿಗರು ನನಗೆ ಎಪ್ಪತ್ತೆರಡು ವರ್ಷ ಎಂದು ನಂಬುವುದೇ ಕಷ್ಟ ನೆನೆಯೋ, ಮೊನ್ನೆಯೋ ನಾನು ಸ್ಲೇಟು ಪುಸ್ತಕ ಹಿಡಿದುಕೊಂಡು ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದ ನೆನಪಾಗುತ್ತದೆ. ಬಂದ ನೆನಪುಗಳು ಯಾವಾಗ ಎನ್ನುವುದು ಕೂಡ ಮುಸುಕು ಎಂದು ಅರೆಮನಸ್ಸಿನಿಂದಲೇ ತಮ್ಮ ನೆನಪಿನಗಣಿಯನ್ನು ಕನ್ನದ ಪ್ರಭ ಪತ್ರಿಕೆಗೆ ಬರೆಯಲಾರಂಭಿಸಿದರು. ಅಡಿಗರು ಆತ್ಮಕಥೆಯನ್ನು ಬರೆಯುವ ಯಾವ ಸಿದ್ದತೆಯನ್ನು ಮಾಡಿಕೊಂಡಿದ್ದವರಲ್ಲ ಆದರೆ ಅವರ ಕಾವ್ಯದಲ್ಲಿ ಅವರ ಏರುಪೇರು ಬದುಕಿನ ನೆನಪು ಹಾಗೂ ಅನುಭವಗಳ ದಟ್ಟಛಾಯೆ ಈ ಕೃತಿಯಲ್ಲಿ ಮಡುಗಟ್ಟಿದೆ.

'ಹೋರಾಟದ ಬದುಕು' ದೇ.ಜವರೇಗೌಡರ ಬದುಕನ್ನು ಬಿಂಬಿಸುವ ಆತ್ಮಕಥನ. ಈ ಕೃತಿ ಅಚ್ಚಗನ್ನಡದ ಧೀಮಂತ ಯೋಧನ ಹೋರಾಟದ ಬದುಕನ್ನು ತೆರೆದಿಡುತ್ತದೆ. ಗುಡಿಸಿಲಿನಲ್ಲಿ ಜನಿಸಿ ಪ್ರತಿಯೊಂದು ಹೆಜ್ಜೆಗೂ ಅನೇಕ ಎಡರುತೊಡರುಗಳನ್ನು ಎದುರಿಸಿ ಶ್ರಮದಿಂದಲೇ ಗುಡಿಸಿಲಿನಿಂದ ಗಂಗೋತ್ರಿಯವರೆಗೆ ನಡೆದು ಬಂದ ಬದುಕಿನ ಮೈಲಿಗಲ್ಲನ್ನು ಈ ಕೃತಿ ಹೇಳುತ್ತದೆ. ಹಾಗೆಯೇ ಈ ಕೃತಿ ಆತ್ಮಕಥಾಸಾಹಿತ್ಯಕ್ಕೆ ಒಂದು ಮಹತ್ತರ ಕೊಡುಗೆಯಾಗಿದೆ. ಇಲ್ಲಿನ ಗದ್ಯದ ಗತ್ತು ಮತ್ತು ಗ್ರಾಮೀಣ ಭಾಷಾ ಸೊಗಡು ಹೆಚ್ಚು ಆಕರ್ಷಣೀಯವೂ, ಮನೋಜ್ಞವೂ ಆಗಿದ್ದು ಆತ್ಮಕಥಾಶೈಲಿಯ ಹೊಸದೊಂದು ಮಾದರಿಗೆ ಬುನಾದಿಯಾಗಿದೆ.

ಎಲ್.ಎಲ್.ಭೈರಪ್ಪನವರ 'ಭಿತ್ತಿ' ಆತ್ಮಕಥೆಯಲ್ಲಿ ಅವರ ವಾಸ್ತವ ಅನುಭವಗಳೇ ದಟ್ಟವಾಗಿ ಚಿತ್ರಣಗೊಂಡಿವೆ. ಅವರ ಬದುಕಿನ ಏರಿಳಿತಗಳನ್ನು ಆತ್ಮಕಥೆಯ ಕಾದಂಬರಿಯ ರೀತಿಯಲ್ಲಿಯೇ ಓದಿಸಿಕೊಂಡು ಹೋಗುತ್ತದೆ. ಈ ಕೃತಿಯಲ್ಲಿ ಲೇಖಕರು ತಾವು ನೌಕರಿಗಾಗಿ ಪರದಾಡಿದ್ದು, ತಾವು ದುಡಿದ ಹಣವನ್ನು ತಮ್ಮ ತಂದೆ ದುಂದು ವೆಚ್ಚ

ಮಾಡಿದ್ದು, ಈ ಎಲ್ಲಾ ವಿಪರ್ಯಾಸದ ನಡುವೆ ತಾವು ಬೆಳೆದುದ್ದನ್ನು ತಮ್ಮ ಆತ್ಮಕಥೆಯಲ್ಲಿ ಬರೆದುಕೊಳ್ಳುತ್ತಾರೆ. ಜೀವನದಲ್ಲಿ ನೋವುಂಡವರು ಲೇಖಕರಾಗುವುದಕ್ಕೂ ಸಾಧ್ಯ ಎಂಬುದು ಇವರ ಆತ್ಮಕಥೆಯ ಆಶಯವಾಗಿದೆ.

'ಹುಳಿಮಾವಿನಮರ' ಎಂಬ ಹೆಸರಿನ ಆತ್ಮಕಥೆಯ ಮೂಲಕ ಬದುಕನ್ನು ತೆರೆದಿಟ್ಟ ಪಿ.ಲಂಕೇಶ್ ರವರು ಕರ್ನಾಟಕ ಕಂಡ ಹೆಸರಾಂತ ಬರಹಗಾರಾರು. ಹಲವು ದಶಕಗಳ ಕಾಲ ಓದುಗರ ಮನವನ್ನು ಗೆದ್ದವರು. ಸಮಾಜವಾದಿನೆಲೆಗಟ್ಟಿನ ನಿಷ್ಠುರ ಬರಹಗಾರರಾಗಿ ವಿದ್ಯಾರ್ಥಿ ದೆಸೆಯಿಂದಲೂ ವ್ಯವಸ್ಥೆಯ ವಿರುದ್ಧ ಬರವಣಿಗೆಯ ಮೂಲಕ ಪ್ರತಿಭಟಿಸಿದವರು.

ತಾವು ಬಾಲ್ಯದಿಂದಲೂ ಅನುಭವಿಸಿದ ಬಡತನ, ನೋವು, ಹತಾಶೆಗಳನ್ನು ವಾಸ್ತವ ನೆಲೆಯಲ್ಲಿ ಹೇಳುತ್ತಾ ತಮ್ಮ ಬರವಣಿಗೆಯ ಮೂಲಕ ಸಾಹಿತ್ಯ ವಲಯದಲ್ಲಿ ಭಿನ್ನವಾಗಿ ನಿಂತ ಲಂಕೇಶರು ತಮ್ಮ ಆತ್ಮಕಥೆಯಲ್ಲಿ ಅವರೆ ಹೇಳುವಂತೆ ತಮ್ಮ ಜಮೀನಿನ ಹತ್ತಿರ ಬೆಳೆದು ನಿಂತಿದ್ದ ಮಾವಿನ ಮರವನ್ನು ತಮ್ಮ ಬದುಕಿನೊಟ್ಟಿಗೆ ಸಮೀಕರಿಸುತ್ತಾ ವಾಟೆ, ಸಸಿ, ಗಿಡ, ಮರ ಈ ಶೀರ್ಷಿಕೆಗಳ ಮೂಲಕ ತಮ್ಮ ಬದುಕಿನ ಏರಿಳಿತಗಳನ್ನು ಹೇಳುತ್ತಾ ಹೋಗುವ ಲಂಕೇಶರು ಸುಳ್ಳು ಹಾಗೂ ಸತ್ಯಗಳ ತೊಳಲಾಟದಲ್ಲಿ ಆತ್ಮಕಥನ ಬರೆಯುವ ಆಶಯವನ್ನು ತೋರಿದ್ದಾರೆ.

ಹಾಸ್ಯ-ವಿಡಂಬನೆಗಳ ಮೂಲಕ ಸಾಮಾಜಿಕ ಓರೆ-ಕೋರೆಗಳನ್ನು ಬಯಲು ಮಾಡಿದ ಬೀಚಿಯವರು ಆತ್ಮಕಥನ ನನ್ನ ಭಯಾಗ್ರಫಿಯಲ್ಲಿ ಮಾನವನ ಜೀವನದಲ್ಲಿ ಸುಖ ಸಂತೋಷದ ಸನ್ನಿವೇಶಗಳು ಇರುವಂತೆ ನೋವಿನ ಸಂಗತಿಗಳು ಇರುವುದು ಸಹಜ ಹಾಗಾಗಿ ಇಡೀ ತಿಂಗಳು ಯಾರಿಗೂ ಹುಣ್ಣಿಮೆಯ ಬೆಳದಿಂಗಳು ಇಲ್ಲ. ಅಂತೆಯೇ ಅಮಾವಾಸ್ಯೆಯ ಕಗ್ಗತ್ತಲೂ ಇಲ್ಲ. ಇವೆರಡರ ಬೆರಕೆಯೇ ಮನುಷ್ಯನ ಬಾಳು ಎಂದು ಬರೆಯುತ್ತಾರೆ; ಬೀಚಿಯವರು ತಮ್ಮ ಆತ್ಮಕಥೆ ಬರೆಯುವಾಗ ಆ ಸನ್ನಿವೇಶಗಳಲ್ಲಿ ತಾನು ಮತ್ತೊಮ್ಮೆ ಜೀವಿಸಿಯೋ, ಅನುಭವಿಸಿಯೋ, ಬರೆಯಬೇಕು. ಇದೊಂದು ಅತಿ ನೋವಿನ ಸಂಗತಿ. ಇಂತಹವನ್ನು ಬರೆಯುವಾಗ ನಾನು ಕಣ್ಣೀರು ಹರಿಸಿದ್ದು ಅದೆಷ್ಟೋ ಎನ್ನುತ್ತಾರೆ. ಹಾಗೆಯೇ ಬೀಚಿಯವರು ಅನೇಕ ಸದ್ಗುಣಗಳಲ್ಲಿ

ಬಹು ದೊಡ್ಡ ಲೋಪಗಳಿರುತ್ತವೆ ಎಂಬುದನ್ನು ತಮ್ಮ ಸೂಕ್ಷ್ಮ ದೃಷ್ಟಿಯಿಂದ ಕಂಡುಕೊಳ್ಳುತ್ತಾರೆ. ಅವರಲ್ಲಿ ಬಹು ದೊಡ್ಡ ಲೋಪವಿರುವುದರಿಂದಲೇ ಅಷ್ಟು ಸದ್ಗುಣಗಳು ಇರುತ್ತವೆ ಎನ್ನುತ್ತಾ ನಕ್ಕು ಬಿಡುತ್ತಾರೆ. ಹೀಗೆ ಸಮಾಜದ ಗಂಭೀರ ವಿಷಯಗಳು ಹಾಸ್ಯಮಯವಾಗಿಯೇ ಅವರ ಭಯಾಗ್ರಫಿಯಲ್ಲಿ ಕಂಡು ಬರುತ್ತವೆ.

ಆರ್.ಸಿ. ಹಿರೇಮಠರವರು ಬರೆದಿರುವ 'ಉರಿಬರಲಿ, ಸಿರಿಬರಲಿ' ಆತ್ಮಕಥೆಯ ಲೇಖಕರ ನೋವು-ನಲಿವಿನ ಸಂಗಮವಾಗಿ ತೆರೆದುಕೊಳ್ಳುತ್ತದೆ. ಹಿರೇಮಠರು ತಮ್ಮ ಬದುಕಿನಲ್ಲಿ ಬೆಳದಿಂಗಳಿಗಿಂತ ಬಿಸಿಲನ್ನೆ ಹೆಚ್ಚಾಗಿ ಕಂಡವರು ಅದನ್ನೆ ಉಂಡು ಕಷ್ಟಗಳಿಗೆ ಕಲ್ಲಾದವರು. ಬದುಕಿನಲ್ಲಿ ಅವರು ಪ್ರಪಾತಕ್ಕೆ ಬಿದ್ದವರೂ ಹೌದು. ಶಿಖರಕ್ಕೆ ಏರಿದವರೂ ಹೌದು. ಆದರೂ ಅವರು ನೋವು ನಲಿವುಗಳಿಗೆ ನಿರ್ಲಿಪ್ತರಾಗಿದ್ದವರು. ಜೋಳಿಗೆಯಿಂದ ಏಳಿಗೆಯಾದವರು ಪಟ್ಟ ಪಾಡೆಲ್ಲಾ ಹಾಡಾದಾಗ ಅದಕ್ಕೆ ದನಿಯದವರು. ಉರಿಬಂದರೂ ಬಗ್ಗದವರು ಸಿರಿ ಬಂದರೂ ಹಿಗ್ಗದವರಾಗಿದ್ದರು. ಇವರ ಆತ್ಮಕಥೆಯ ಒಳಹೊಕ್ಕರೆ ಹಿರೇಮಠರು ಬಾಲ್ಯದಿಂದಲೂ ಬಡತನದ ನಡುವೆಯು ಬದುಕಿನ ಅಸ್ತಿತ್ವಕ್ಕಾಗಿ ಆತ್ಮವಿಶ್ವಾಸದಿಂದಲೇ ಹೋರಾಟ ನಡೆಸಿ ಕುಲಪತಿ ಹುದ್ದೆಯನ್ನು ಅಲಂಕರಿಸಿದ್ದು ಜೊತೆಗೆ ತಮ್ಮ ಬದುಕಿನುದ್ದಕ್ಕೂ ಶಿಷ್ಯ ಪರಂಪರೆಯನ್ನು ಕಟ್ಟುತ್ತಲೆ ಹಲವಾರು ಸಂಘ ಸಂಸ್ಥೆಗಳೀಗೆ ಬೆನ್ನೆಲುಬಾಗಿ ದುಡಿದ ತಮ್ಮ ಸೃಜನಸೀಲ ಬದುಕನ್ನು ತಮ್ಮ ಆತ್ಮಕಥೆಯ ಮೂಲಕ ಓದುಗರಿಗೆ ಉಣಬಡಿಸುತ್ತಾರೆ.

ಕಯ್ಯಾರ ಕಿಇಣ್ಣ ರೈ ರವರ ದುಡಿಮೆಯೇ ನನ್ನ ದೇವರು' ಎಂಬ ಆತ್ಮಕಥೆಯು ತುಂಬಾ ಸಾರಯುಕ್ತವಾಗಿದ್ದು ವಿಭಿನ್ನ ನೆಲೆಯಲ್ಲಿ ಸಾಗುತ್ತದೆ. ಇವರು ಹುಟ್ಟು ಕನ್ನಡಾಭಿಮಾನಿಗಳು 'ಕಾಸರಗೋಡೆಂಬ ಆತ್ಮ, ಕರ್ನಾಟಕವೆಂಬ ಪರಮಾತ್ಮನಲ್ಲಿ ಸೇರಬೇಕೆಂಬ ಹೆಬ್ಬಯಕೆ ಹೊಂದಿದ್ದವರು. ಅದಕ್ಕಾಗಿಯೇ ಏಕೀಕರಣದಿಂದ ಹೋರಾಟಕ್ಕೆ ದನಿಯಾಗಿ ನಿಂತವರು. ದೇಶ ಭಾಷೆಯ ಬಗೆಗೆ ಅಪಾರ ಒಲವು ಬೆಳೆಸಿಕೊಂಡವರು. ನಾಡಿನುದ್ದಕ್ಕೂ ಹಿರಿಯ ಸ್ವಾತಂತ್ರ ಹೋರಾಟಗಾರ, ಉತ್ತಮ ಶಿಕ್ಷಕ, ಶ್ರೇಷ್ಟ ಕವಿ ಎಂದು ಹೆಸರು ಪಡೆದವರು. ಹಳ್ಳಿಯಲ್ಲಿ ಹುಟಿ ಅಪ್ಪಟ ಕೃಷಿಕರಾಗಿ ಶ್ರಮಿಸಿರುವ ವ್ಯಕ್ತಿತ್ವ ಇವರದು. ಗಡಿನಾಡ ಕನ್ನಡಿಗರ ಅಸ್ತಿತ್ವಕ್ಕಾಗಿ ನಿರಂತರ ಹೋರಾಡಿದವರು. ತಾವು ಹುಟ್ಟಿದ ಹಳ್ಳಿಯಲ್ಲಿ ಯಾವುದೇ ಸಾಂಸ್ಕೃತಿಕ ಪರಿಸರ

ವಿರದಿದ್ದರೂ ವಿದ್ಯಾರ್ಥಿದೆಸೆಯಿಂದಲೂ ನಾಡು ನಿಡಿಗಾಗಿ ತಮ್ಮನ್ನು ಅರ್ಪಿಸಿಕೊಂಡ ತ್ಯಾಗಮಯ ಬದುಕನ್ನು ಆತ್ಮಕಥೆಯ ಮೂಲಕ ತೆರೆದಿಡುತ್ತಾ ಹೋಗುತ್ತಾರೆ.

ಹಾಗೆಯೇ ದೇವುಡುರವರ 'ಕರಿನಾಡ ಸಾಹಿತ್ಯಜ್ಞಾನ' ಸೇಡಿಯಾಪು ಕೃಷ್ಣಭಟ್ಟರ 'ಈಶ್ವರ ಸಂಕಲ್ಪ' ಅಥವಾ 'ದೈವಲೀಲೆ' ಸ.ಸ.ಮಳವಾಡಂರವರ 'ಹಳ್ಳಿಯ ಹುಡುಗ ದಾರಿಸಾಗಿದೆ ಆತ್ಮಕಥೆ. ಕು.ಶಿ. ಹರಿದಾಸಭಟ್ಟರ ನಿವೇದನೆ, ಸಾಹಿತ್ಯಕಾರನ ಇತಿವೃತ್ತಿ ಆತ್ಮಕಥೆಗಳು ಒದುಗ ವಲಯವನ್ನು ವಿಶೇಷವಾಗಿ ಗಮನ ಸೆಳೆಯುತ್ತವೆ.

ಕೋ.ಚೆನ್ನಬಸಪ್ಪರವರು ತಮ್ಮ 'ನನ್ನ ಮನಸ್ಸು ನನ್ನ ನಂಬುಗೆ' ಎಂಬ ಆತ್ಮಕಥೆಯಲ್ಲಿ ತಮ್ಮ ಬದುಕಿನ ಹೋರಾಟದ ನೆನಪುಗಳನ್ನು ದಾಖಲಿಸುತ್ತಾರೆ. ಪೆರ್ಲಕೃಷ್ಣಭಟ್ಟರವರ 'ಬದುಕಿದ ಫಲವೇನು?' ಆತ್ಮಕಥೆಯಲ್ಲಿ ಭಟ್ಟರು ತಾವು ನಂಬಿದ ಮೌಲ್ಯಸಿದ್ಧಾಂತಕ್ಕೆ ಅನುಗುಣವಾಗಿ ತಮ್ಮ ಆತ್ಮಕಥೆಯನ್ನು ರಚಿಸಿದಂತಿದೆ. ತಮ್ಮ ಜೀವನದ ಯಾವುದೇ ಘಟನೆಗಳನ್ನು ಹಾಗೆಯೇ ಯಥಾವತ್ ಮಂಡಿಸಿಲ್ಲ ಬದಲಾಗಿ ಇಡೀ ಘಟನೆಗಳನ್ನು ಸಾರ್ವಜನಿಕ ಬದುಕಿನಲ್ಲಿಟ್ಟು ತಮ್ಮದೇ ದಾಟಿಯಲ್ಲಿ ವಿಮರ್ಶೆ, ವಿಶ್ಲೇಷಣೆಗೆ ಮುಕ್ತವಾಗಿ ಒಳಪಡಿಸಿರುವುದನ್ನು ಕಾಣಬಹುದು.

ಕನ್ನಡ ಸಾಹಿತ್ಯದಲ್ಲಿ ಸೃಜನಶೀಲವಾಗಿ ಬೆಳೆಯಲಾರಂಭಿಸಿದ ಆತ್ಮಕಥೆಗಳು ಕವಿ, ಸಾಹಿತಿಗಳನ್ನು ಮೀರಿ ಎಲ್ಲಾ ಕ್ಷೇತ್ರಗಳಲ್ಲಿಯೂ ತನ್ನ ಇರುವಿಕೆಯ ಛಾಪನ್ನು ಮೂಡಿಸತೊಡಗಿತು. ಅಂತೆಯೇ ಕಲಾವಿದರು, ಸಂತರು, ರಾಜಕಾರಣಿಗಳು, ಕ್ರೀಡಾಪಟುಗಳು, ವಿಜ್ಞಾನಿಗಳು ತಮ್ಮ ವೃತ್ತಿ ಬದುಕನ್ನು ಆತ್ಮಕಥೆ, ಅಭಿನಂದನ ಗ್ರಂಥಗಳ ರೂಪದಲ್ಲಿ ಅನಾವರಣಗೊಳಿಸಿರುದನ್ನು ಕಾಣಬಹುದು.

ಮಲ್ಲಾಡಿಹಳ್ಳಿಯ ಶ್ರೀ ರಾಘವೇಂದ್ರ ಸ್ವಾಮೀಜಿಯವರ 'ಜೋಳಿಗೆಯ ಪವಾಡ' ಆತ್ಮಕಥೆಯು ಸ್ವಾಮೀಜಿಯವರ ನೂರುವರ್ಷಗಳ ಅನುಭವಗಳನ್ನು ಮುಕ್ತವಾಗಿ ದಾಖಲಿಸುತ್ತದೆ. ಹಾಗೆಯೇ ಕೆ.ಚೆನ್ನಬಸವನಗೌಡರು 'ನಾನೊಬ್ಬ ಸಾರ್ವಜನಿಕ ' ಎಂಬ ಹೆಸರಿನ ಆತ್ಮಕಥೆಯಲ್ಲಿ ತಮ್ಮ ಬಾಲ್ಯ, ಶಿಕ್ಷಣ, ನೌಕರಿ, ರಾಜಕೀಯ ಜೀವನವನ್ನು ನಿರ್ಭಾವುಕರಾಗಿ ಬರೆಯುತ್ತಾ ಹೋಗುತ್ತಾರೆ. ಡಾ॥ ಯಲ್ಲಪ್ಪರೆಡ್ಡಿಯವರು 'ಹಸಿರುಹಾದಿ' ಆತ್ಮಕಥೆಯ ಮೂಲಕ ತಾವು ಅರಣ್ಯ ಅಧಿಕಾರಿಯಾಗಿ ವೃತ್ತಿ ಬದುಕಿನಲ್ಲಿ ಕಂಡುಂಡ ಅನುಭವಗಳನ್ನು ಸಮಾಜದ ಮುಂದೆ ತೆರೆದಿಡುತ್ತಾರೆ.

ಜಿ.ಎಂ. ಪಾಟೀಲರ 'ನೆನಪಿನಂಗಳದಲ್ಲಿ' ಆತ್ಮಕಥೆಯು ಕನ್ನಡ ಕಲಾವಿದನ ಜೀವನ ಚರಿತ್ರೆಯಾಗಿಯೇ ಮಹತ್ವ ಪಡೆಯುತ್ತದೆ. ಹಾಗೆಯೇ ಎಂ.ರಾಮಚಂದ್ರರ ನೆನಪಿನಬುತ್ತಿ ಅನುಭವಗಳ ಕಣಜವಾದರೆ, ಸ್ವಾಮಿ ವಿರಾಜೇಶ್ವರರವರ 'ವಿಜ್ಞಾನಿಯ ಸತ್ಯಾನ್ವೇಷಣೆ' ಆತ್ಮಕಥೆಯು ವಿಜ್ಞಾನಿಯು ಸನ್ಯಾಸಿಯಾದ ಪರಿಯನ್ನು ತೆರೆದಿಡುತ್ತಾ ಹೋಗುತ್ತದೆ.

ಪ್ರೊ.ಎಸ್.ಆರ್. ಗಂಜಾಳರವರ 'ನಾನು' ಹೆಸರಿನ ಆತ್ಮಕಥೆಯು ಗಂಜಾಳರು ತಮ್ಮ ಬದುಕಿನಲ್ಲಿ ಕಷ್ಟ-ಸುಖ ಎರಡನ್ನು ಸಮಾನವಾಗಿ ಸ್ವೀಕರಿಸಿ ಜೀವನದ ಹೆಜ್ಜೆಗಳನ್ನು ದಿಟ್ಟತೆಯಿಂದ ತುಳಿದ ಬದುಕಿನ ಸವಾಲುಗಳನ್ನು ಸ್ವೀಕರಿಸಿದ ಪರಿಯನ್ನು ಬಿಚ್ಚುತ್ತಾ ಸಾಗುತ್ತದೆ. ನಾನು ಇಲ್ಲದಿದ್ದರೆ ನಮ್ಮ ಅಸ್ತಿತ್ವವು ಎಲ್ಲಿದೆ? ನಾನು ಮುಖ್ಯವೇ? ಎಂಬ ಸವಾಲಿನ ರೂಪದಲ್ಲಿ ಆತ್ಮಕಥೆಯ ಸಾರವು ಗನಿಕರಿಸುತ್ತದೆ.

ಅಜ್ಞಾತ ಅಧ್ಯಾಪಕನ ಆತ್ಮಕಥನ: ಎ.ಎಸ್.ನಂಜುಂಡಸ್ವಾಮಿಯುವರ ಆತ್ಮಕಥನವಾಗಿದ್ದು ಈ ಕೃತಿಯಲ್ಲಿ ತಾವು ಶಿಕ್ಷಕರಾಗಿ, ಕಂಡುಂಡ ಅನುಭವಗಳನ್ನು ಸವಿಸ್ತರವಾಗಿ ಬರೆಯುತ್ತಾರೆ. 'ರಂಗಭೀಷ್ಮ' ಎಂದೇ ಖ್ಯಾತರಾಗಿದ್ದ ರಂಗಕಲಾವಿದ ಗುಬ್ಬಿ ವೀರಣ್ಣನವರು 'ಕಲೆಯೇ ಕಾಯಕ' ಎಂಬ ಆತ್ಮಕಥೆಯನ್ನು ಬರೆಯುವುದರ ಮೂಲಕ ಕನ್ನಡದ ಆತ್ಮಚರಿತ್ರೆಗೆ ವಿಶೇಷವಾದ ಕೊಡುಗೆಯನ್ನು ನೀಡಿದ್ದಾರೆ. ಕಲೆಯನ್ನೇ ಕಾಯಕಮಾಡಿಕೊಂಡು ಬದುಕಿದ ಇವರು ತಮ್ಮ ಕಲಾಬದುಕಿನುದ್ದಕ್ಕೂ ಅನುಭವಿಸಿದ ಸುಖ: ದುಖಗಳನ್ನು ಆತ್ಮಕಥೆಯ ರೂಪದಲ್ಲಿ ಬಿಚ್ಚಿಡುತ್ತಾರೆ.

ಶಾಂತಾಹುಬುಳೀಕರರ 'ನಾಳೀನ ಚಿಂತ್ಯಾಕ' ಆತ್ಮಕಥೆಯು ಅವರ ಬದುಕಿನ ದು:ಖ ದುಮ್ಮಾನಗಳನ್ನು ಅಭಿವ್ಯಕ್ತಪಡಿಸುತ್ತಾ ಸಾಗಿದರೆ, ಕೆರೆಮನೆ ಶಿವರಾಮ ಹೆಗಡ್ಡೆಯವರ 'ನೆನಪಿನ ರಂಗಸ್ಥಳ' ಆತ್ಮಕಥೆಯ ಮೂಲಕ ಯಕ್ಷಗಾನ ಕಲಾವಿದರಾಗಿ ತಾವು ಬದುಕನ್ನು ಸ್ವೀಕರಿಸಿದ ಅನುಬವಗಳನ್ನು ಹಂಚಿಕೊಳ್ಳುತ್ತಾರೆ. ಹಾಗೆಯೇ ಏಣಗಿ ಬಾಳಪ್ಪನವರ 'ನನ್ನ ಬಣ್ಣದ ಬದುಕು' ಆತ್ಮಕಥನವು ಒಬ್ಬ ಧೀಮಂತ ಕಲಾವಿದನ ವೃತ್ತಿ ರಂಗಭೂಮಿಯ ಅನುಭವದ ಜಾಡುಗಳು ಹಾಗೂ ಸಮಾಜಿಕ ಆಗು-ಹೋಗುಗಳನ್ನು ಕಲಾವಿದ ಮತ್ತು ರಂಗಭೂಮಿಯ ಕೊಡುಗೆಗಳೇನೆಂಬುದನ್ನು ಇವರ ಆತ್ಮಕಥೆಯ ತೆರೆದ ಪುಟಗಳು ಮನವರಿಕೆ ಮಾಡುತ್ತವೆ.

ಹಾಗೆಯೇ ಕನ್ನಡದ ವರನಟರೆಂದೇ ಖ್ಯಾತರಾದ ನಟ ಡಾ॥ ರಾಜ್ ಕುಮಾರ್ ರವರ ಹೃದ್ಯವದ ಆತ್ಮಕಥೆ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಧಾರಾವಾಹಿ ರೂಪದಲ್ಲಿ ಪ್ರಕಟವಾಯಿತು. ಇಲ್ಲಿ ಮಣ್ಣಿನ ಮಗನೊಬ್ಬ ತನಗೆ ರಕ್ತಗತವಾಗಿ ಬಂದ ಕಲೆಯನ್ನು ಭಕ್ತಿಯಿಂದ ಆರಾಧಿಸಿ, ಸಾಧನೆಯ ಶಿಕರವನ್ನೇರುವಾಗ ತಾನು ಪಟ್ಟಪಾಡು, ತೊಟ್ಟ ನಿಷ್ಠೆಯನ್ನು ಇವರ ಆತ್ಮಕಥೆಯ ಪುಟಗಳು ಅನಾವರಣಗೊಳಿಸುತ್ತವೆ.

ಕರ್ನಾಟಕದಲ್ಲಿ ಭೀಮನ ಪಾತ್ರದ ಮೂಲಕ ಹೆಸರು ಪಡೆದ ರಂಗಭೂಮಿ ಕಲಾವಿದೆ ಕೆ.ನಾಗರತ್ನಮ್ಮ ಅವರ ಮರಿಯಮ್ಮನಹಳ್ಳಿ ರಂಗಸಿರಿ ಆತ್ಮಕಥನವು ಸ್ತ್ರೀಯೊಬ್ಬರ ರಂಗಭೂಮಿಯ ಮತ್ತು ಸಾರ್ವಜನಿಕ ಕ್ಷೇತ್ರದ ಜೀವನಾನುಭವಗಳನ್ನು ಹೇಳುತ್ತದೆ.

ಇನ್ನು ಪುರುಷಪ್ರಧಾನ ವ್ಯವಸ್ಥೆಯ ನಡುವೆಯು ಶೋಷಿತ ಹೆಣ್ಣಿನ ದನಿಯಾಗಿ ನಿಂತು ಸ್ತ್ರೀವಾದಿ ನೆಲೆಗಟ್ಟಿನಲ್ಲಿ ಸಾಹಿತ್ಯ ಬರೆಯಲಾರಂಭಿಸಿದ ಮಹಿಳಾ ಲೇಖಕಿಯರು ತಮ್ಮ ಕಾವ್ಯ, ಕಥೆ, ಕಾದಂಬರಿಗಳ ರೂಪದಲ್ಲಿ ವ್ಯವಸ್ಥೆಯನ್ನು ಪ್ರಶ್ನಿಸುವ ಬಂಡಾಯದ ಧೋರಣೆಯೊಂದಿಗೆ ಮಹಿಳಾ ಸಾಹಿತ್ಯವನ್ನು ಬರೆಯತೊಡಗಿದವರಾದರು ಆತ್ಮಕಥೆಗಳ ರೂಪದಲ್ಲಿ ತಮ್ಮ ಬದುಕನ್ನು ತೆರೆದಿಟ್ಟಿದ್ದು ಕಡಿಮೆಯೇ ಆದರೂ ಮಹಿಳೆ ಈ ವ್ಯ ವಸ್ಥೆಯ ಸಾಂಪ್ರದಾಯಿಕ ಸಂಕೋಲೆಗಳನ್ನು ಕಳಚಿ ಮುಕ್ತವಾಗಿ ಇಂದು ಆತ್ಮಕಥೆಯ ರೂಪದಲ್ಲಿ ತನ್ನ ಬದುಕನ್ನು ಮುಕ್ತವಾಗಿ ಬರೆದುಕೊಳ್ಳುತ್ತಿರುವುದಕ್ಕೆ ಸಾಕ್ಷಿಯಾಗಿ ಹಲವಾರು ಆತ್ಮಕಥೆಗಳು ನಮ್ಮ ಕಣ್ಮುಂದೆ ನಿಂತಿರುವುದನ್ನು ಕಾಣಬಹುದು.

ಆರಂಭದ ಭಾರತೀಯ ಬಾಷೆಗಳಾದ ಮರಾಠಿ ಮತ್ತು ಬಂಗಾಳಿ ಭಾಷೆಗಳಲ್ಲಿನ ಮಹಿಳಾ ಲೇಖಕಿಯರು ತಮ್ಮ ಬದುಕನ್ನು ಆತ್ಮಕಥೆಗಳ ರೂಪದಲ್ಲಿ ಬರೆಯಲಾರಂಭಿಸಿದರು. ಅಂತೆಯೇ ಕನ್ನಡ ಸಾಹಿತ್ಯದಲ್ಲಿಯೂ ಮಹಿಳಾ ಲೇಖಕಿಯರು ಸ್ತ್ರೀವಾದಿ ನೆಲೆಯಲ್ಲಿ ತಮ್ಮ ಆತ್ಮಕಥೆಗಳನ್ನು ಬರೆಯಲಾರಂಭಿಸಿದರು.

1977 ರಲ್ಲಿ ಬರೆದ ವಾಸಂತಿ ಪಡುಕೋಣೆಯವರ 'ಜೀವನ ಹೋರಾಟ' ಎಂಬ ಆತ್ಮಕಥೆಯು ಕನ್ನಡದ ಮೊಟ್ಟ ಮೊದಲ ಆತ್ಮಕಥೆಯಾಗಿ ನಿಲ್ಲುತ್ತದೆ. ಈ ಆತ್ಮಕಥೆಯ ಮೂಲಕ ವಾಸಂತಿ ಪಡುಕೋಣೆಯವರು ಹೆಣ್ಣಾಗಿ ಹುಟ್ಟಿ ತಾವು ಬದುಕಿನಲ್ಲಿ ಎದುರಿಸಿದ ಸವಾಲುಗಳನ್ನು ವ್ಯವಸ್ಥೆಯ ಮುಂದೆ ತೆರೆದಿಡುತ್ತಾ ಹೊಗುತ್ತಾರೆ.

'ಹೆಣ್ಣಿನ ದೃಷ್ಟಿಯಲ್ಲಿ ಈ ಶತಮಾನ' ಪಾರ್ವತಮ್ಮ ಮಹಲಿಂಗ ಶೆಟ್ಟಿಯವರ ಆತ್ಮಕಥೆ. ಈ ಕೃತಿಯಲ್ಲಿ ಪಾರ್ವತಮ್ಮನವರು ತಾವು ರಾಜಕೀಯ ಕುಟುಂಬದವರಾಗಿಯು 20ನೇ ಶತಮಾನದ ಮಹಿಳೆಯ ಪರಿಸ್ಥಿತಿ ಹಾಗೂ ಸ್ವಾತಂತ್ರ್ಯ ಪುರ್ವದ ಮಹಿಳೆಯ ಬದುಕಿನ ರೀತಿನೀತಿಗಳನ್ನು ಮುಕ್ತವಾಗಿ ಚಿತ್ರಿಸುತ್ತಾರೆ. ಬಾಲ್ಯದಲ್ಲಿಯೇ ವೈವಾಹಿಕ ಬದುಕಿಗೆ ಕಾಲಿಟ್ಟ ಪರಮೇಶ್ವರಿ ಲೋಕೆಶ್ ರವರು ತಮ್ಮ ಅರವತ್ತು ವರ್ಷಗಳ ಬದುಕನ್ನು ' ಬಹುದಾನ್ಯದಿಂದ ಬಹುದಾನ್ಯಕ್ಕೆ' ಕೃತಿಯಲ್ಲಿ ಅನಾವರಣಗೊಳಿಸುತ್ತಾರೆ.

ಹಾಗೆಯೇ ಕನ್ನಡದ ಹೆಸರಾಂತ ಮನೋವಿಶ್ಲೇಷಣಾತ್ಮಕ ಲೇಖಕಿ ಡಾ॥ ಅನುಪಮಾ ನಿರಂಜನರ ನೆನಪು : 'ಸಿಹಿ ಕಹಿ' ಮತ್ತು 'ಬರಹಗಾರ್ತಿಯ ಬದುಕು' ಆತ್ಮಕಥೆಗಳು, ಹೆಣ್ಣಾಗಿ, ತಾಯಿಯಾಗಿ, ವೈದ್ಯೆಯಾಗಿ ಎಲ್ಲಾಕ್ಕಿಂತ ಮನೋವೈಜ್ಞಾನಿಕ ಲೇಖಕಿಯಾಗಿ ತಾನು ಕಂಡುಂಡ ಅನುಭವಗಳನ್ನು ಮುಕ್ತವಾಗಿ ತೆರೆದಿಡುತ್ತಾ ಹೋಗುತ್ತಾರೆ.

ಅಕ್ಷರ ಸಂಸ್ಕೃತಿಯ ಅರಿವೇ ಇಲ್ಲದೆ ಕಾಡು ಸಂಸ್ಕೃತಿಯ ಪ್ರತೀಕವಾಗಿ ಆದಿವಾಸಿ ಸಮುದಾಯಗಳ ನಾಯಕಿಯಾಗಿ ನಿಂತ ಜಾಜಿ ತಿಮ್ಮಯ್ಯರವರ 'ಹೆಜ್ಜೇನು' ಆತ್ಮಕಥೆಯು ತಾನು ಹೆಣ್ಣಾಗಿ ತಮ್ಮ ಆದಿವಾಸಿ ಸಮುದಾಯದ ಬದುಕಿನ ಅಸ್ತಿತ್ವಕ್ಕಾಗಿ ಅವಿರತ ಹೋರಾಡಿದ ಹೋರಾಟದ ಬದುಕನ್ನು ಜಾಜಿಯವರು ಆತ್ಮಕಥೆಯ ರೂಪದಲ್ಲಿ ಸಾಕ್ಷಿ ಕರಿಸುತ್ತಾ ಹೋಗುತ್ತಾರೆ.

ಶಾರದಾ ಹೆಮ್ಮಿಗೆಯವರ 'ಬದುಕು ಕೊಟ್ಟಿದ್ದು ಕಲಿಸಿದ್ದು' ಯಶವಂತಿ ಸುವರ್ಣ ಅವರ 'ಪಶ್ಚಿಮಕ್ಕೆ ವಾಲಿದ ಸೂರ್ಯ' ದು, ಸರಸ್ವತಿ ಅವರ 'ಈಗೇನ್ ಮಾಡೀರಿ?' ಗಂಗೂಬಾಯಿ ಹಾನಗಲ್ ರವರ 'ನನ್ನ ಬದುಕಿನ ಹಾಡು' ಬಿ.ಜಯಮ್ಮರವರ 'ಅಭೀನೇತ್ರಿ' ಶೈಲಜ ನಾಗರಘಟ್ಟ ರವರ 'ಕಿಚ್ಚಿಲ್ಲದ ಬೇಗೆ' ಸಾರಾ ಅಬೂಬಕ್ಕರ್‌ರವರ' ಮುಸ್ಲಿಂ ಹುಡುಗಿ' ಶಾಲೆ ಕಲಿತದ್ದು ಇನ್ನೂ ಮುಂತಾದ ಮಹಿಳಾ ಲೇಖಕಿಯರ ಆತ್ಮಕಥೆ, ಪುಸ್ತಕರೂಪದಲ್ಲಿ , ಸಮಗ್ರ ಸಂಪುಟಗಳಲ್ಲಿ ಮಹಿಳಾ ಬದುಕನ್ನು ಪ್ರಾತಿನಿಧಿಕವಾಗಿ ದಾಖಲೀಕರಿಸಿರುವುದನ್ನು ಕನ್ನಡ ಸಾಹಿತ್ಯದಲ್ಲಿ ಕಾಣಬಹುದು.

ಇನ್ನೂ ಕನ್ನಡ ಸಾಹಿತ್ಯದಲ್ಲಿ ಪ್ರಮುಖವಾಗಿ ದಲಿತ ಆತ್ಮಕಥೆಗಳನ್ನು ಅವಲೋಕಿಸ ಹೊರಟರೆ ನಮ್ಮ ಸಾಹಿತ್ಯದ ಪ್ರೇರಕಶಕ್ತಿಯಾಗಿ ನಮ್ಮ ಕಣ್ಮುಂದೆ ನಿಲ್ಲುವುದು ಮರಾಠಿ

ಸಾಹಿತ್ಯ. ಅದರಲ್ಲಿಯ ಶೋಷಿತರ, ದಲಿತರ ಯಾತನಾಮಯ ಬದುಕನ್ನು ಆ ನೆಲೆಯಲ್ಲಿಯೇ ಹೇಳ ಹೊರಟ ಮರಾಠಿ ದಲಿತ ಆತ್ಮಕಥೆಗಳು ಕನ್ನಡ ಸಾಹಿತ್ಯದ ದಲಿತ ಲೇಖಕರ ಮನಸ್ಸೆಳೆಯುವಲ್ಲಿ ಯಶಸ್ವಿಯಾದವು.

ಈ ನಿಟ್ಟಿನಲ್ಲಿಯೇ ಬರೆಯಲಾರಂಭಿಸಿದ ಕನ್ನಡ ದಲಿತ ಲೇಖಕರು ಇಡೀ ದಲಿತ ಲೋಕದ ಬದುಕನ್ನು ತಮ್ಮ ಆತ್ಮಕಥೆಗಳ ರೂಪದಲ್ಲಿ ಅಭಿವ್ಯಕ್ತಿಸತೊಡಗಿದರು. ಆದರೂ ಕನ್ನಡದಲ್ಲಿ ದಲಿತ ಆತ್ಮಕಥೆಗಳಾಗಿ ಹೊರಹೊಮ್ಮಿರುವುದು ಬೆಳವಣಿಯಷ್ಟು ಮಾತ್ರವೆ. ಕಾರಣ ದಲಿತ ಲೇಖಕರು ತಮ್ಮ ಒಡಲಾಟದ ನೋವನ್ನು ಕಾವ್ಯ, ಕಥೆ, ಕಾದಂಬರಿಗಳಲ್ಲಿ ಹೆಚ್ಚಾಗಿ ಕಟ್ಟಿಕೊಟ್ಟರು. ಹಾಗಾಗಿ ಇದೇ ದಲಿತ ಸಾಹಿತ್ಯವೇ ಆತ್ಮಕಥೆಗಳ ರೂಪ ತಳಿಯಿತೆಂದರೆ ತಪ್ಪಾಗಲಾರದು. ಆದರೂ ದಲಿತ ಲೇಖಕರು ಪ್ರತ್ಯೇಕವೆಂಬಂತೆ ಅಲ್ಲೊಂದು ಇಲ್ಲೊಂದು ಆತ್ಮಕಥೆಗಳನ್ನು ದಾಖಲಿಸತೊಡಗಿದರು.

ಅಂತೆಯೇ ಅರವಿಂದ ಮಾಲಗತ್ತಿಯವರ 'ಗೌಮೆಂಟ್ ಬ್ರಾಹ್ಮಣ' ಕನ್ನಡದ ಮೊದಲ ದಲಿತ ಆತ್ಮಕಥೆಯಾಗಿ ಕಾಣಿಸಿಕೊಂಡಿತು. ಅಲ್ಲದೆ ಮುಂದಿನ ಆತ್ಮಕಥೆಗಳಿಗೆ ಪ್ರೇರಣೆ ನೀಡಿತು. ಈ ನಿಟ್ಟಿನಲ್ಲಿಯೇ ಸಿದ್ಧಲಿಂಗಯ್ಯನವರ 'ಊರುಕೇರಿ' ತುಂಬಾಡಿ ರಾಮಯ್ಯನವರ 'ಮಣೆಗಾರ' ಕೆ.ಗೋವಿಂದರಾಜುರವರ 'ಮನವಿಲ್ಲದವರ ಮಧ್ಯೆ' ಸಿ.ಜಿ. ಕೃಷ್ಣಸ್ವಾಮಿಯವರ 'ಕತ್ತಾಲೆಬೆಳದಿಂಗಳೊಳಗ' ಮುನಿವೆಂಕಟಪ್ಪನವರ 'ಅಂತ್ಯಜನ ಅಂತರಂಗ' ಮುಂತಾದ ಆತ್ಮಕಥೆಗಳು ದಲಿತ ಬದುಕಿನ ಘೋರ ಅನುಭವಗಳ ಗಣಿಯಾಗಿ ಹೊರಹೊಮ್ಮಿದವು.

ಒಟ್ಟಾರೆ ಕನ್ನಡ ಸಾಹಿತ್ಯದಲ್ಲಿ ಬಂದಿರುವ ಆತ್ಮಕಥೆಗಳನ್ನು ಇತರ ಭಾರತೀಯ ಸಾಹಿತ್ಯದೊಂದಿಗೆ ಅವಲೋಕಿಸಿದರೆ ಕನ್ನಡದಲ್ಲಿನ ಆತ್ಮಕಥೆಗಳು ಕಡಿಮೆಯೇ. ಆದರೂ ಕನ್ನಡದಲ್ಲಿ ಪ್ರಕಾರಸಹಿತ್ಯವಾಗಿ ತಮ್ಮ ಛಾಪು ಮೂಡಿಸುವಲ್ಲಿ ಯಶಸ್ವಿಯಾಗಿವೆ. ಈ ಹಿನ್ನಲೆಯಲ್ಲಿ ಕನ್ನಡ ಆತ್ಮಕಥೆಗಳ ಸಮೀಕ್ಷೆಯನ್ನು ಸಮಗ್ರಗೊಳಿಸಿ ಹೇಳಲು ಪ್ರಯತ್ನಿಸಲಾಗಿದೆಯಾದರೂ ಕೆಲವು ಆತ್ಮಕಥೆಗಳು ತೆರೆಮರೆಯಲ್ಲಿ ಉಳಿದಿರಬಹುದು. ಹಾಗಾಗಿ ನನ್ನ ಅಧ್ಯಯನದ ಪರಧಿಯೊಳಗೆ ಅತ್ಮಕಥೆಗಳ ಸಮಗ್ರ ಸಮೀಕ್ಷೆ ನಡೆಸಲು ಸಾಧ್ಯವಾಗಿಲ್ಲದಿದ್ದರೂ ಅವುಗಳ ಹುಡುಕಾಟವನ್ನಾದರೂ ಆರಂಭಿಸಿ ಸ್ವಲ್ಪಮಟ್ಟಿನ ಯಶಸ್ಸನ್ನು ಗಳಿಸಿಕೊಳ್ಳುವಲ್ಲಿ ನನ್ನ ಸಂಶೋಧನೆ ನೆರವಾಗಿದೆ.

# ಅಧ್ಯಾಯ - ೩

## ಪ್ರಮುಖ ದಲಿತ ಆತ್ಮಕಥೆಗಳಾಗಿ : ಗೌರ್ಮೆಂಟ್ ಬ್ರಾಹ್ಮಣ, ಊರು-ಕೇರಿ ಮತ್ತು ಮಣೆಗಾರ

ತೊರೆಯಾಗಿ ಹರಿದ ಕನ್ನಡ ಸಾಹಿತ್ಯ ಗಂಗೋತ್ರಿಯಲ್ಲಿ ಆತ್ಮಕತೆಗಳ ಇರುವಿಕೆಯು ಮಹತ್ವವಾದದ್ದು. ಆದರೆ ಕಥೆ, ಕಾದಂಬರಿಗಳಂತೆ ಹಿರಿದಾದುದಲ್ಲಾ. ಕನ್ನಡದ ಮಟ್ಟಿಗೆ ಕಿರಿದಾದುದು. ಆದರೆ ಇತರ ಭಾರತೀಯ ಭಾಷೆಗಳ ಸಾಹಿತ್ಯಗಳಲ್ಲಿ ಆತ್ಮಕಥೆಗಳು ಸಮೃದ್ಧಿಯಾಗಿಯೂ ತನ್ನೊಡಲ ರಕ್ತಮಾಂಸದಿಂದ ಸತ್ವಯುತವಾಗಿಯೂ ಮೈದಳಿದಿರುವುದನ್ನು ಕಾಣಬಹುದು.

ಇಡೀ ಭಾರತೀಯ ಸಾಹಿತ್ಯಕ್ಕೆ ಆತ್ಮಕಥೆಗಳ ಪ್ರಕಾರ ಸಾಹಿತ್ಯ ಪಾಶ್ಚಾತ್ಯ ಸಾಹಿತ್ಯದಿಂದ ಎರವಲಾಗಿ ಬಂದಿದ್ದರು. ಕನ್ನಡ ಸಾಹಿತ್ಯಕ್ಕೆ ಸೀಮಿತಗೊಳಿಸಿ ನೋಡುವುದಾದರೆ ಮೊದಲು ಆತ್ಮಕಥೆಗಳ ಬೀಜರೂಪ ಕಾಣಿಸಿಕೊಂಡಿದ್ದು ಮುಖ್ಯವಾಗಿ ಮರಾಠಿ, ಗುಜರಾತಿ, ಪಂಜಾಬಿ ಭಾಷೆಗಳಲ್ಲಿ ಅಂತೆಯೇ ಕನ್ನಡ ದಲಿತ ಆತ್ಮಕಥೆಗಳ ಬೀಜರೂಪ ಮೊಳೆತದ್ದು ಮರಾಠಿ ದಲಿತ ಆತ್ಮಕಥೆಗಳ ಪ್ರಭಾವ, ಪ್ರೇರಣೆಗಳಿಂದಲೇ.

ಆದರೂ ಕನ್ನಡ ದಲಿತ ಆತ್ಮಕಥೆಗಳು ಕನ್ನಡ ನೆಲದಲ್ಲಿ ಮೊಳಕೆಯೊಡೆಯುವ ಹೊತ್ತಿಗೆ ದಲಿತೇತರ ಕನ್ನಡ ಕವಿಗಳು ತಮ್ಮ ಕಥೆ, ಕಾದಂಬರಿಗಳ ರೂಪದಲ್ಲಿ ದಲಿತರ ಬದುಕಿನ ಚಿತ್ರಣವನ್ನು ಅನಾವರಣಗೊಳಿಸಿದ್ದರು. ಅಂತೆಯೇ ಕುವೆಂಪು ತಮ್ಮ 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳ ಮೂಲಕ, ಮಾಸ್ತಿ ಕಥೆಗಳ ಮೂಲಕ, ಕಾರಂತರು 'ಚೋಮನದುಡಿ' ಕಾದಂಬರಿಯ ಮೂಲಕ, ಅನಂತಮೂರ್ತಿಯವರು 'ಸಂಸ್ಕಾರ' ಕಾದಂಬರಿಯ ಮೂಲಕ ದಲಿತರ ಬದುಕನ್ನು ತೆರೆದಿಟ್ಟಿದ್ದರಾದರೂ ದಲಿತ ಬದುಕಿನ ಒಳಸುಳಿಯ ತಲ್ಲಣಗಳನ್ನು ಅನುಭವಾತ್ಮಕವಾಗಿ ಕಟ್ಟಿಕೊಡುವಲ್ಲಿ ಆ ಕಾದಂಬರಿಯು ಯಶಸ್ವಿಯಾಗಿಲ್ಲದಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ನೋಡುವುದಾದರೆ ೧೨ನೇ ಶತಮಾನದ' ಕ್ರಾಂತಿಯುಗದ' ವಚನಗಳೆ ಆತ್ಮಕತೆಗಳ ಪ್ರತೀಕವಾಗಿ ಶೋಷಿತರ, ದಲಿತರ ಅಂತರಾಳದ ನೋವಿನ ದನಿಯಾಗಿ ಹೊರಹೊಮ್ಮಿರುವುದನ್ನು ದಾಖಲೀಕರಿಸಬಹುದು.

ಮುಖ್ಯವಾಗಿ ೬೦-೭೦ರ ದಶಕದಲ್ಲಿ ಮಹಾರಾಷ್ಟ್ರದಲ್ಲಿ ಆರಂಭವಾದ ' ದಲಿತ ಪ್ಯಾಂಥರ್ಸ್ ಹೆಚ್ಚು ಕ್ರಿಯಾಶೀಲವಾದಂತೆ ಅದರ ಪ್ರೇರಣೆ ಪ್ರಭಾವಗಳು ಕರ್ನಾಟಕದಲ್ಲಿಯೂ ಹರಿಯತೊಡಗಿತು. ಈ ನಿಟ್ಟಿನಲ್ಲಿಯೇ ಕರ್ನಾಟಕದಲ್ಲಿಯು ದಲಿತ-ಬಂಡಾಯ ಚಳುವಳಿಗಳು ರೂಪು ತಳೆದವು. ಅಲ್ಲದೆ ಬಿ.ಬಸವಲಿಂಗಪ್ಪನವರ 'ಬೂಸ ಪ್ರಕರಣ', ಚಳುವಳಿಯೋಪಾದಿಯಾಗಿ ಕನ್ನಡ ಸಾಹಿತ್ಯಕ್ಕೆ ಅದರಲ್ಲಿಯೂ ದಲಿತ ಬಂಡಾಯ ಸಾಹಿತ್ಯಕ್ಕೆ ಹೊಸ ಸಂಚಲನ ನೀಡಿತು. ಈ ನಿಟ್ಟಿನಲ್ಲಿಯೇ ಕುವೆಂಪು, ಕಾರಂತರಂತಹ ಹಿರಿಯ ಕವಿಗಳು ಬಂಡಾಯ ಧೋರಣೆಯಂದಿಗೆ ಅದನ್ನು ಸಮರ್ಥಿಸಿ ಸಾಹಿತ್ಯ ಬರೆಯಲಾರಂಭಿಸಿದರು.

ಇವೆಲ್ಲಾದರ ಪ್ರೇರಣೆಯೊಂದಿಗೆ ಚಳುವಳಿಯ ಬೆನ್ನೆಲುಬಾಗಿ ದಲಿತ ಸಾಹಿತ್ಯ, ಕಾವ್ಯ, ಕಥೆ, ನಾಟಕ, ಕಾದಂಬರಿಗಳ ರೂಪದಲ್ಲಿ ದಲಿತರ-ಶೋಷಿತರ ಬದುಕಿನ ದನಿಯಾಗಿ ಹರಿಯ ತೊಡಗಿತು. ಆದರೆ ಆತ್ಮಕಥೆಗಳು ಆ ನೆಲೆಯಲ್ಲಿ ದಲಿತ ಬದುಕನ್ನು ಅಭಿವ್ಯಕ್ತಿಸುವಲ್ಲಿ ಕೊಂಚ ತಡವರಿಸಿತಾದರೂ ದಲಿತ ಕವಿಗಳು ನಿಧಾನವಾಗಿಯಾದರೂ ಆತ್ಮಕಥೆಗಳ ರೂಪದಲ್ಲಿ ತಮ್ಮ ಬದುಕನ್ನು ತೆರೆದಿಟ್ಟರು.

ಆದರೂ ದಲಿತಕವಿ, ಕಲಾವಿದರ ನೈಜ ಬದುಕನ್ನು ಬಿಂಬಿಸುವಂತ ಆತ್ಮಕಥೆಗಳನ್ನು ಕೃತಿರೂಪದಲ್ಲಿ ದಾಖಲಿಸಲು ದಲಿತ ಲೇಖಕರೆ ತಡ ಮಾಡಿದರೋ ?ಅಥವಾ ಅದಕ್ಕೊಂದು ಬೇಸ್ ನಿರ್ಮಿಸುವುದು ಸಾಧ್ಯವಾಗದೇ ಹೋಯಿತೋ ? ಅಥವಾ ಅಂಥದೊಂದು ಪ್ರಕಾರ ಸಾಹಿತ್ಯದಿಂದ ದಲಿತ ಬದುಕನ್ನು ಅಭಿವ್ಯಕ್ತಿಸಲು ಮಾಧ್ಯಮವಾಗಬಹುದೆಂದು ತಿಳಿಯಲಿಲ್ಲವೋ? ಆ ಹೊಳವನ್ನು ಹುಡುಕುವುದು ಕಷ್ಟ. ಆದರೆ ಮರಾಠಿ ದಲಿತ ಸಾಹಿತ್ಯದಲ್ಲಿ ಆತ್ಮಕಥೆಗಳು, ನೋವು-ಅವಮಾನ, ಸ್ವಾಭಿಮಾನದ ಪ್ರತೀಕವಾಗಿ, ಲಕ್ಷ್ಮಣಗಾಯಕವಾಡರ 'ಉಚಲ್ಯಾ', ಶರಣಕುಮಾರ ನಿಂಬಾಳೆಯವರ 'ಅಕ್ರಮಸಂತಾನ' ಮಲ್ಲಾರಿರಾವ್ ದೇಶಮುಖ್‌ರ 'ಗಬಾಳ', ಮಾಧವ ದೇಸಾಯಿಯವರ' ಕುಣಿಯೋಘಮಾ' ಮುಂತಾದ ಪ್ರಮುಖ ಆತ್ಮಕಥೆಗಳು ಕಾಣಿಸಿಕೊಂಡ ನಂತರ ಕನ್ನಡದಲ್ಲಿ ದಲಿತ ಆತ್ಮಕಥೆಗಳು ಅವುಗಳ ಮುಂದುವರೆದ ಭಾಗವೆಂಬಂತೆ ಬರೆಸಿಕೊಳ್ಳತೊಡಗಿದವು.

ಆದರೂ ಕನ್ನಡ ದಲಿತ ಆತ್ಮಕಥೆಗಳಾಗಿ ನಮಗೆ ಕಾಣಿಸಿಕೊಳ್ಳುವುದು ಬೆರಳೆಣಿಕೆಯಷ್ಟು ಕೃತಿಗಳು ಮಾತ್ರ. ಅವುಗಳೆಂದರೆ ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' (೧೯೯೪). ಸಿದ್ಧಲಿಂಗಯ್ಯರವರ 'ಊರು-ಕೇರಿ' (೧೯೯೬) ತುಂಬಾಡಿ ರಾಮಯ್ಯನವರ 'ಮಣೆಗಾರ'(೧೯೯೯). ಕೆ. ಗೋವಿಂದರಾಜುರವರ 'ಮನವಿಲ್ಲದವರ ಮಧ್ಯೆ ' (೨೦೦೦), ಸಿ.ಜಿ. ಕೃಷ್ಣಸ್ವಾಮಿಯವರ ' ಕತ್ತಲೆ ಬೆಳದಿಂಗಳೊಳಗ' (೨೦೦೨) ಮತ್ತು ಮುನಿವೆಂಕಟಪ್ಪನವರ 'ಅಂತ್ಯಜನ ಅಂತರಂಗ' ಇವು ಕನ್ನಡದ ದಲಿತ ಆತ್ಮಕಥೆಗಳಾಗಿ ಪ್ರತಿನಿಧಿಸುತ್ತವೆ. ಈ ಎಲ್ಲಾ ಆತ್ಮಕಥೆಗಳಲ್ಲಿನ ಮುಖ್ಯ ಒಳಹರವು ಒಂದೇಯಾದರೂ ನನ್ನ ಅಧ್ಯಯನದ ಪರಿಧಿಯೊಳಗೆ ಪ್ರಮುಖವಾಗಿ ಗೌರ್ಮೆಂಟ್ ಬ್ರಾಹ್ಮಣ, ಊರು-ಕೇರಿ, ಮಣೆಗಾರ ಆತ್ಮಕಥೆಗಳ ಒಳಹೊಕ್ಕಿ ನೋಡಲು ಪ್ರಯತ್ನಿಸಿದ್ದೇನೆ.

ದಲಿತ ಆತ್ಮಕಥೆಗಳು ತಮ್ಮ ಒಡಲಿನಲ್ಲಿ ಮುಖ್ಯವಾಗಿ ಅವಮಾನ, ಹಸಿವು, ಮತ್ತು ಸ್ವಾಭಿಮಾನದ ಬದುಕನ್ನು ಅಭಿವ್ಯಕ್ತಿಸುತ್ತವೆ. ಅಸ್ಪೃಶ್ಯತೆ ದಲಿತ ಸಮುದಾಯವನ್ನು ಬೆನ್ನು ಬಿಡದೆ ಕಾಡುವ ಭೂತಕಾರದ ಸಮಸ್ಯೆ. ಈನಿಟ್ಟಿನಲ್ಲಿಯೇ ಆತ್ಮಕಥೆಗಳಲ್ಲಿ ಪ್ರಧಾನವಾಗಿ ಅಸ್ಪೃಶ್ಯತೆಯ ಘೋರ ಅನುಭವ, ಜೊತೆಯಲ್ಲಿ ಹಸಿವು, ಬಡತನ, ವ್ಯವಸ್ಥೆಯ ಅಟ್ಟಹಾಸದ ನಡುವೆಯೂ ಸ್ವಾಭಿಮಾನದ ಬದುಕಿಗಾಗಿ ಪಡೆದ ಶಿಕ್ಷಣ, ಸಾಮಾಜಿಕ ಸಂಬಂಧಗಳಿಗಾಗಿ ನಡೆಸಿದ ಅವಿರತ ಹೋರಾಟದ ಅಂಶಗಳು ಪ್ರಧಾನವಾಗಿ ದಲಿತ ಆತ್ಮಕಥೆಗಳ ಒಡಲಲ್ಲಿ ಇಂಬುಗೊಂಡಿರುವುದನ್ನು ಕಾಣಬಹುದು.

**ಆತ್ಮಕಥೆ : ಗೌರ್ಮೆಂಟ್ ಬ್ರಾಹ್ಮಣ**

ಕನ್ನಡ ಸಾಹಿತ್ಯದಲ್ಲಿ ದಲಿತ ಆತ್ಮಕಥೆಗಳು ಮೈದಾಳಲು ಪ್ರಮುಖವಾಗಿ ಮರಾಠಿ ದಲಿತ ಆತ್ಮಕಥೆಗಳ ಪ್ರೇರಣೆ ಹಾಗೂ ಪ್ರಭಾವಗಳೇ ಮುಖ್ಯಕಾರಣ. ಏಕೆಂದರೆ ದಲಿತ ಬದುಕಿನ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಆತ್ಮಕಥೆಯನ್ನು ಬರೆಯಬೇಕೆಂಬ ಸಂವೇದನೆ ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಆತ್ಮಕಥೆಯನ್ನು ಬರೆಯಬೇಕೆಂಬ ಸಂವೇದನೆ ಮೊಳೆತಿದ್ದ ದಲಿತ ಮರಾಠಿ ಆತ್ಮಕಥೆಗಳಿಂದ ಈ ಹಿನ್ನೆಲೆಯಲ್ಲಿ ಕನ್ನಡ ದಲಿತ ಸಾಹಿತ್ಯದಲ್ಲಿಯೂ ಅವಮಾನ, ಸ್ವಾಭಿಮಾನದ ಪ್ರತೀಕಗಳಾಗಿ ಆತ್ಮಕಥೆಗಳು ಕಾಣಿಸಿ

ಕೊಳ್ಳತೊಡಗಿದವು. ಈ ನಿಟ್ಟಿನಲ್ಲಿನಾವು ಕನ್ನಡಸಾಹಿತ್ಯದಲ್ಲಿನ ಮೊದಲ ದಲಿತ ಆತ್ಮಕಥೆಯನ್ನು ನೋಡುವುದಾದರೆ ದಲಿತ ಕವಿ ಡಾ. ಅರವಿಂದ ಮಾಲಗತ್ತಿಯವರು ೧೯೯೪ರಲ್ಲಿ ಪ್ರಕಟಿಸಿದ 'ಗೌರ್ಮೆಂಟ್ ಬ್ರಾಹ್ಮಣ' ಹೆಸರಿನ ಆತ್ಮಕಥೆಯೇ ಕನ್ನಡ ದಲ್ಲಿ ದಾಖಲುಗೊಂಡ ಮೊದಲ ದಲಿತ ಆತ್ಮಕಥೆ.

ಮರಾಠಿ ದಲಿತ ಆತ್ಮಕಥೆಗಳು ಮೈಹೊದ್ದು ಬಂದ ಹಿಂಸೆ, ನೋವು, ಅವಮಾನ, ಹೋರಾಟಗಳ ಹಸಿ ಅನುಭವಗಳ ಪ್ರತಿರೂಪವಾಗಿಯೇ ಕನ್ನಡ ದಲಿತ ಆತ್ಮಕಥೆಗಳು ರೂಪುತಳೆದಿವೆ. ಹಾಗಾಗಿ ಇತರ ಆತ್ಮಕಥೆಗಳಿಗೆ ಹೋಲಿಸಿದರೆ ದಲಿತ ಆತ್ಮಕಥೆಗಳು ತೀರಾ ಭಿನ್ನ ನೆಲೆಯಲ್ಲಿಯೇ ನಿಲ್ಲುತ್ತವೆ. ಕಾರಣ ಮನುಷ್ಯತ್ವಕ್ಕೆ ನಡುಕ ಹುಟ್ಟಿಸುವ ಅನುಭವಗಳ ಅಜ್ಞಾತ ಬದುಕೊಂದು ಈ ಆತ್ಮಕಥೆಗಳಲ್ಲಿ ಅನಾವರಣಗೊಳ್ಳುತ್ತದೆ. ಇದು ಕೇವಲ ದಲಿತ ನೊಬ್ಬನ ಬದುಕಿನ ನೋವಿನ ಕಥೆಯಾಗಿರದೆ ಇಡೀ ದಲಿತ ಸಮುದಾಯದ ಬದುಕನ್ನು ಅನಾವರಣಗೊಳಿಸುತ್ತವೆ. ಅಂತೆಯೇ ಬಾಲಚಂದ್ರ ಫುಡಕೆಯವರು 'ಇಡೀ ದಲಿತ ಆತ್ಮಕಥೆಗಳನ್ನು ನೋವಿನ ಕಥೆಗಳು' ದುಃಖಾಂಚ ಅಭಂಗಗಾಥಾ' (ಕನ್ನಡ ದಲಿತ ಸಾಹಿತ್ಯ: ಲೇಖನ ಪುಟ. ೮೧) ಎಂದು ಉಲ್ಲೇಖಿಸಿದ್ದಾರೆ.

ದಲಿತ ಸಮುದಾಯದಲ್ಲಿ ಹುಟ್ಟಿದ ಡಾ. ಅರವಿಂದ ಮಾಲಗತ್ತಿಯವರು 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯ ಮೂಲಕ ತಾವು ದಲಿತರಾಗಿ ಹುಟ್ಟಿ ತಮ್ಮ ಬಾಲ್ಯದಿಂದ ಹಿಡಿದು ವಿದ್ಯಾರ್ಥಿ ಜೀವನದವರೆಗೂ ತಾವು ಹಾಗೂ ತಮ್ಮ ಕುಟುಂಬ ಅನುಭವಿಸಿದ ನೋವು ಹಿಂಸೆ, ಅಸ್ಪೃಶ್ಯತೆ ಅವಮಾನ, ಶೋಷಣೆ ಅವುಗಳನ್ನು ಮೀರಿದ ಹೋರಾಟಗನ್ನು ಬಾಲ್ಯದ ಅನುಭವಗಳು ಹಸಿಯಿರುವಾಗಲೇ ಯಥಾವತ್ತಾಗಿ ಕಟ್ಟಿಕೊಟ್ಟಿರುವುದನ್ನು ಕಾಣಬಹುದು. ಈ ಆತ್ಮಕಥೆಯಲ್ಲಿ ವಿಶೇಷವಾಗಿ ಮಾಲಗತ್ತಿಯವರು ತಮ್ಮನ್ನು ಬಾಲ್ಯದಿಂದ ಹಿಡಿದು ಕಾಲೇಜುದಿನಗಳವರೆಗೆ ಕಾಡಿದ ಅನುಭವಗಳನ್ನು ಮಾತ್ರ ಈ ಆತ್ಮಕಥೆಯಲ್ಲಿ ಹಿಡಿದಿಡಲು ಯಶಸ್ವಿಯಾಗಿದ್ದಾರೆ. ಏಕೆಂದರೆ ಕೃತಿಯ ಆರಂಭದಲ್ಲಿ ಲೇಖಕರೆ ಬರೆಯುತ್ತಾ 'ಆತ್ಮಕಥೆ' ಬರೆಯುವುದು ನನ್ನ ಚಿಕ್ಕವಯಸ್ಸಿಗೆ ಬೇಕೆ ಎನ್ನುವ ಪ್ರಶ್ನೆ ನನ್ನನ್ನು ಕಾಡಿದೆ. ಕನ್ನಡ ಸಾಹಿತ್ಯದಲ್ಲಿ ಆತ್ಮಕಥೆ ಬರೆಯುವುದು ಸಾಮಾನ್ಯವಾಗಿ ಕೂದಲು ನೆರೆತು ತಲೆ ಅಲುಗಾಡುವಾಗ. ಹಾಗಾಗಿ ಅನುಭವಗಳನ್ನು ಹೇಳಿಕೊಳ್ಳಲು ಕೂದಲು ನೆರೆಯಬೇಕಾಗಿಲ್ಲ. ಬಾಯೊಳಗಿನ ಹಲ್ಲುಗಳು

ಉದುರಬೇಕಾಗಿಲ್ಲ. ಬದುಕಿನ ವಾಸ್ತವದ ಸಂಗತಿಗಳನ್ನು ಯಥಾವತ್ತಾಗಿ ಕೊಡುವುದು ಎಂದರೆ ಬದುಕಿರುವಾಗಲೇ ಜನತೆಯ ಬಾಯಿಗೆ ಎಲೆ-ಅಡಿಕೆಯಾಗುವುದು ಎಂದರ್ಥ. ಈ ನಿಟ್ಟಿನಲ್ಲಿ ನೋಡಿದಾಗ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕತೆಗಳ ಆಯಾಮವನ್ನು ಮೀರಿ ವಿಶೇಷ ನೆಲೆಯಲ್ಲಿ ನಿಲ್ಲುವುದನ್ನು ಕಾಣಬಹುದು.

ಹಾಗೆಯೇ ಮಾಲಗತ್ತಿಯವರು ತಮ್ಮ ಆತ್ಮಕಥೆಯನ್ನು 'ಗೌರ್ಮೆಂಟ್ ಬ್ರಾಹ್ಮಣ ಎಂದು ಸಂಭೋದಿಸಿರುವುದು ಕುತೂಹಲವೆನಿಸುತ್ತಲೇ ಅದರ ವಿಶೇಷತೆಗೆ ಇಂಬು ಕೊಡುತ್ತದೆ. ಅದನ್ನು ಲೇಖಕರೇ ಸಮರ್ಥಿಸುತ್ತಾ 'ಗೌರ್ಮೆಂಟ್ ಬ್ರಾಹ್ಮಣ'ಎಂದರೆ 'ಅಸ್ಪೃಶ್ಯ' ಎಂದರ್ಥ. ಆದರೆ ಈ ಎರಡೂ ಶಬ್ಧಗಳ ಹಿಂದಿರುವ ಧ್ವನಿ ಮಾತ್ರ ಬೇರೆ ಬೇರೆ. ಗೌರ್ಮೆಂಟ್ ಬ್ರಾಹ್ಮಣ ಎಂದು ಕೆಲವರು ವ್ಯಂಗ್ಯವಾಗಿ ಕರೆದಂತೆ 'ದೇವರ ಮಕ್ಕಳು' ಎಂದು ಕರೆದದ್ದು ಇದೆ ಎಂದು ಅರ್ಥೈಸುತ್ತಾರೆ. ಈ ಹಿನ್ನೆಲೆಯಲ್ಲಿ ಗ್ರಹಿಸುವುದಾದರೆ ಇತರ ಆತ್ಮಕಥೆಗಾರರು ತಮ್ಮ ಆತ್ಮಕಥೆಗಳಿಗೆ ತಮ್ಮ ಸಮುದಾಯದ ಹೆಸರಾಗಲಿ, ತಮ್ಮ ವೃತ್ತಿಯ ಹೆಸರನ್ನಾಗಲೀ ತಲೆಬರಹವನ್ನಾಗಿಸಿ ಬರೆದು ಕೊಂಡಿರುವುದನ್ನು ಕಾಣಲು ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ನೋಡಿದಾಗ ದಲಿತ ಆತ್ಮಕಥೆಗಳು ಭಿನ್ನವಾಗಿಯೇ ಆಕರ್ಷಿಸುತ್ತವೆ. ಅಲ್ಲದೆ ಹೆಚ್ಚು ಚರ್ಚೆಗೆ ಇಂಬು ನೀಡುತ್ತವೆ. ಉದಾಹರಣೆಗೆ ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ, ತುಂಬಾಡಿ ರಾಮಯ್ಯನವರ 'ಮಣೆಗಾರ' ಮುನಿವೆಂಕಟಪ್ಪವರ 'ಅಂತ್ಯಜ ಅಂತರಂಗ' ಆತ್ಮಕಥೆಗಳ ತಲೆಬರಹಗಳು ದಲಿತ ಸಮುದಾಯದ ಐಡೆಂಟಿಟಿಗಳಾಗಿ ಉಲ್ಲೇಖಗೊಂಡಿರುವುದು ಈ ಆತ್ಮಕಥೆಗಳು ವಿಶೇಷವೆನಿಸುತ್ತವೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಕನ್ನಡದ ಮೊದಲ ದಲಿತ ಆತ್ಮಕಥೆಯೆನಿಸಿಕೊಂಡು 'ಗೌರ್ಮೆಂಟ್ ಬ್ರಾಹ್ಮಣ' ಭಿನ್ನ ನೆಲೆಯಲ್ಲಿಯೇ ನಮ್ಮನ್ನು ಆವರಿಸಿಕೊಳ್ಳುತ್ತದೆ. ಈ ಆತ್ಮಕಥೆಯ ಒಡಲಿನಲ್ಲಿ ಮಾಲಗತ್ತಿಯವರ ಬಾಲ್ಯದ ದಿನಗಳಲ್ಲಿನ ಹಸಿವಿದೆ, ಬಡತನವಿದೆ, ಅವಮಾನವಿದೆ, ಶೋಷಣೆಯಿದೆ, ಶಿಕ್ಷಣದ ತುಡಿತವಿದೆ, ಮನುಷ್ಯ ಸಂಬಂಧಗಳ ಹುಡುಕಾಟವಿದೆ., ಇವುಗಳೆಲ್ಲದರ ನಡುವೆ ಸ್ವಾಭಿಮಾನದ ಪ್ರಜ್ಞೆ, ಚಿಗುರೊಡೆಯುತ್ತದೆ. ಇವುಗಳೆಲ್ಲದರ ಶೋಧದಂತೆ ಮಾಲಗತ್ತಿಯವರ ಬದುಕು ತೆರೆದ ಪುಟಗಳಲ್ಲಿ ಹರಿದಾಡಿರುವುದನ್ನು ಕಾಣಬಹುದು.

ಈ ಆತ್ಮಕಥೆಯಲ್ಲಿ ನಾವು ಪ್ರಧಾನವಾಗಿ ಗುರುತಿಸ ಬಹುದಾದ ಪಾತ್ರವೆಂದರೆ ಮಾಲಗತ್ತಿಯವರ ಅಜ್ಜಿ (ಆಯಿ) ಯ ಪಾತ್ರ ಈ ಆತ್ಮಕಥೆಯ ಮತ್ತೊಂದು ವಿಶೇಷವೆನಿಸುತ್ತದೆ. ಈ ಲೇಖಕರ ಅಜ್ಜಿಯಾಗಿ ಇಡೀ ದಲಿತಕೇರಿಯ ಹಿರಿತಲೆಯಾಗಿ ಮಾಲಗತ್ತಿಯವರ ಬಾಲ್ಯದ ಚಿಗುರನ್ನು ಪೋಷಿಸುತ್ತಾ , ಅವರ ಬದುಕಿನ ಒಡನಾಡಿಯಾಗಿ, ರಕ್ಷಕಳಾಗಿ ಅವಳ ತಾಯ್ತನದಿಂದಲೇ ಲೇಖಕರ ಬದುಕಿನ ಅವಮಾನ, ಹಸಿವಿನ ನಡುವೆ ಗಟ್ಟಿಯಾಗಿ ನಿಲ್ಲುತ್ತಾಳೆ. ಮಾಲಗತ್ತಿಯವರೆ ಹೇಳುವಂತೆ 'ಅವಳಿಲ್ಲದಿದ್ದರೆ ನಮ್ಮ ಬಾಲ್ಯದ ದಿನಗಳಿಗೆ ಅಸ್ತಿತ್ವವೇ ಇಲ್ಲ' ಅನ್ನುವಷ್ಟರ ಮಟ್ಟಿಗೆಬಾಲ್ಯದ ಬದುಕಿನಲ್ಲಿ ಹಾಸುಹೊಕ್ಕಿದ್ದಾಳೆ. ಎನ್ನುವ ಮಾಲಗತ್ತಿಯವರು ಮುಂದುವರೆದು ಅವಳ ಆತ್ಮಕಥೆಯಲ್ಲಿ ನಾನೊಂದು ಪಾತ್ರವಾಗಿದ್ದುಕೊಂಡು ಬರೆಯಬೇಕೆಂದಿದ್ದೆ ಎನ್ನುವಲ್ಲಿ ಲೇಖಕರ ಬಾಲ್ಯದ ಬದುಕಿನಲ್ಲಿ ಬೆನ್ನೆಲುಬಾದ ಆಯಿಯ ತಾಯ್ತನ ದಟ್ಟವಾಗಿ ಮನೆಮಾಡಿರುವುದು ತಿಳಿಯುತ್ತದೆ.

ದಲಿತ ಆತ್ಮಕಥೆಗಳಲ್ಲಿ ನಾವು ಮುಖ್ಯವಾಗಿ ಕೇಂದ್ರೀಕರಿಸಿ ನೋಡುವುದಾದರೆ ಜಾತಿವ್ಯವಸ್ಥಿತ ಸಮಾಜವೊಂದರ ಒಳಗೆ ದಲಿತ ಆತ್ಮಕಥೆಯ ರೂಪದಲ್ಲಿ ತನ್ನ ನೋವಿನ ಬದುಕನ್ನು ತೆರೆದಿಟ್ಟಾಗ ಅದು ಅವನದಷ್ಟೆ ಬದುಕಾಗಿರದೆ ಇಡೀ ದಲಿತ ಸಮುದಾಯದ ಬದುಕಿನ ಚರಿತ್ರೆಯಾಗಿರುತ್ತದೆ. ಈ ಅರ್ಥದಲ್ಲಿ ಗ್ರಹಿಸಿದಾಗ ಗೌರ್ಮೆಂಟ್ ಬ್ರಾಹ್ಮಣ'ವು ಒಬ್ಬ ದಲಿತನ ಚರಿತ್ರೆಯಾಗಿ ನಿಲ್ಲದೆ ಇಡೀ ದಲಿತರಬದುಕಿನ ಚರಿತ್ರೆಯಾಗಿ ದಾಖಲುಗೊಂಡಿರುವುದನ್ನು ಕಾಣಬಹುದು.

ಮಾಲಗತ್ತಿಯವರ ಬಾಲ್ಯದದಿನಗಳಲ್ಲಿನ ಬದುಕು ಇಪ್ಪತ್ತು ಅಧ್ಯಾಯಗಳ ರೂಪದಲ್ಲಿ ಯಾವುದೇ ಪೂರ್ವಾಗ್ರಹವಿಲ್ಲದಂತೆ ಯಥಾವತ್ತಾಗಿ ಗೌರ್ಮೆಂಟ್ ಬ್ರಾಹ್ಮಣ' ಕೃತಿಯಲ್ಲಿ ಹರಿದಾಡುತ್ತವೆ. ಪ್ರತಿಯೊಂದು ಪ್ರಸಂಗವನ್ನು ತೆರೆದಿಡುವಾಗಲೂ ಪೀಠಿಕೆಯೊಂದಿಗೆ ತಮ್ಮ ಅನುಭವಗಳನ್ನು ಹೇಳುತ್ತಾ ಹೋಗುವ ಪ್ರಸಂಗಗಳು ಕೊನೆಯಲ್ಲಿ ಗಂಭೀರವಾದ ಅನುಭವಗಳನ್ನು ಅದರ ಎಲ್ಲಾ ಸೂಕ್ಷ್ಮತೆಗಳೊಂದಿಗೆ ಹಿಡಿದಿಟ್ಟಿರುವ ಪ್ರಬುದ್ಧತೆಯಿದೆ. ಹಾಗಾಗಿ ಗೌರ್ಮೆಂಟ್ ಬ್ರಾಹ್ಮಣ ಮಾಲಗತ್ತಿಯವರು ವೇದನೆ ತುಂಬಿದ ದಾರ್ಶನಿಕನಂತೆ ವಿವೇಚಿಸಿರುವ ಗಂಭೀರ ಬರಹಗಳಾಗಿವೆ. ಕೆಲವೊಮ್ಮೆ

ಸಮಾಜದ 'ವರ್ತನೆಯನ್ನು ಪ್ರಶ್ನಿಸುವ, ತರ್ಕಿಸುವ ಆಕ್ರೋಶದ ಅಂಚಿಗೂ ಸರಿದಿರುವುದುಂಟು.ಇವುಗಳ ನಡುವೆ ಅನುಭವಗಳನ್ನು ಹಿಡಿದಿಟ್ಟಿರುವ ಒಡಲಿನ ಚಿತ್ರಮಯಭಾಷೆಯಲ್ಲಿ ಈ ಕೃತಿಯ ಪ್ರಾಮುಖ್ಯತೆ ಅಡಗಿರುವುದನ್ನು ಕಾಣಬಹುದು.

ಈ ಆತ್ಮಕಥೆಯ ಜೀವಂತಿಕೆಯಲ್ಲಿ ಮಾಲಗತ್ತಿಯವರು ತಮ್ಮ ಅನುಭವಗಳನ್ನು ವೈಭವೀಕರಿಸದೆ ಅಥವಾ ಮರೆಮಾಚದೆ ಬದುಕಿನ ವಾಸ್ತವತೆಯನ್ನು ಯಥಾವತ್ತಾಗಿ ತೆರೆದಿಟ್ಟಿರುವುದು ಓದುಗರನ್ನು ವಿಸ್ಮಯಗೊಳಿಸುತ್ತಲೇ ಗಂಭೀರ ಚಿಂತನೆಗೆ ತೊಡಗಿಸುತ್ತವೆ. ಇಲ್ಲಿನ 'ಹೆಣದ ಮೇಲಿನ ದುಡ್ಡು' ಮತ್ತು 'ಮದುವೆಯ ಊಟ, ನಾಳಿನ ಕಸದ ಪಾಳಿ, ಬೆದೆಗೆ ಬಿದ್ದ ಎಮ್ಮೆ ಓಡಿಬಂದ ಕೋಣ, ಹಂಡ್ಯಾನ ಲಾಳಿ ಕತ್ತರಿಸಿದ ಪ್ರಸಂಗ, ನನ್ನಕೇರಿ ನನ್ನ ಓದು, ಗೌರ್ಮೆಂಟ್ ಬ್ರಾಹ್ಮಣರ ರಾಘವೇಂದ್ರಭಕ್ತಿ ಇನ್ನೂ ಮುಂತಾದ ಪ್ರಸಂಗಗಳು ಮಾಲಗತ್ತಿಯವರ ನೋವು ಅವಮಾನದ ಪ್ರತಿರೂಪಗಳಾಗಿ ಕಾಣಿಸಿಕೊಳ್ಳುತ್ತವೆ.

ಲೇಖಕರ 'ಹೆಣದ ಮೇಲಿನ ದುಡ್ಡು' ಮತ್ತು 'ಮದುವೆಯ ಊಟ' ಪ್ರಸಂಗ ಈ ಸಮಾಜದ ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಅಸಮಾನತೆಗೆ ಹಿಡಿದ ಕನ್ನಡಿಯಂತಿದೆ. ಸವರ್ಣೀಯರು ಸತ್ತ ಹೆಣದ ಮೇಲೆ ಎಸೆಯುವ ದುಡ್ಡು ಈ ಸಮಾಜಕ್ಕೆ ಅಮಂಗಳ ಅಲ್ಲದೆ ಸಂಪ್ರದಾಯದ ಹೆಸರಿನಲ್ಲಿ ತೋರಿಸುವ ಪ್ರತಿಷ್ಠೆಯ ಪರಾಕಾಷ್ಠತೆ. ಆದರೆ ಬಡತನದ ಬದುಕು ದೂಡುವ ದಲಿತರಿಗೆ ಹೆಣದ ಮೇಲೆ ಎಸೆಯುವ ಪುಡಿಗಾಸು ಕೂಡ ಅಮೂಲ್ಯ ಎಂಬುದನ್ನು ಈ ಪ್ರಸಂಗ ಹೇಳುತ್ತಲೇ ಈ ಸಮಾಜದ ಅಸಮಾನತೆಯನ್ನು ಸೂಕ್ಷ್ಮವಾಗಿ ಬಿಂಬಿಸುತ್ತದೆ.

'ಬೆದೆಗೆ ಬಿದ್ದ ಎಮ್ಮೆ ಓಡಿ ಬಂದ ಕೋಣ'ಪ್ರಸಂಗದಲ್ಲಿಯ ಮುಗ್ಧ ಪ್ರಾಣಿಗಳ ಮೇಲೆಯೂ ಹೇರುವ ಜಾತಿಯ ನಿರ್ಬಂಧ, ಸೃಷ್ಟಿಯ ಜೀವಿಗಳಿಗೂ ಸಹಜವಾಗಿ ಸೇರಲು ಬಿಡದ ಈ ಸಮಾಜ ಪರಸ್ಪರ ಪ್ರೇಮಿಸಿದ ಮನುಷ್ಯಜೀವಿಗಳನ್ನು ತಾನೇ ಹೇಗೆ ಒಂದಾಗಲೂ ಅವಕಾಶ ಮಾಡಿಕೊಡುತ್ತದೆ ? ಎಂಬ ಪ್ರಶ್ನೆಸಹಜವಾಗಿಯೇ ಕಾಡುತ್ತದೆ. 'ನನ್ನ ಮಾಜಿ ಪ್ರೇಯಸಿ' ಪ್ರಸಂಗದಲ್ಲಿನ ದಲಿತ ಎಂಬ ಕಾರಣಕ್ಕಾಗಿ 'ಬ್ರಾಹ್ಮಣ ಹುಡುಗಿಯನ್ನು ಮದುವೆಯಾಗಲು ನಿರ್ಬಂಧ ಹೇರಿದ ಈ ಕ್ರೂರ ವ್ಯವಸ್ಥೆ, ದಲಿತ ಹುಡುಗ

ಬರೆದಿದ್ದು ಎನ್ನುವ ಕಾರಣಕ್ಕಾಗಿ ಮಠದಲ್ಲಿಟ್ಟ ರಾಘವೇಂದ್ರ ಪಟವನು ಅಲ್ಲಿಂದ ತೆಗೆಸುವಂತಹ ಅಮಾನವೀಯ ಘಟನೆಗಳು ಸಂವೇದನಾಶೀಲತೆಯುಳ್ಳ ಯಾರನ್ನೇ ಆದರೂ ಕಾಡದೆ ಬಿಡಲಾರವು.

ಹಾಗಾಗಿ ಅರವಿಂದ ಮಾಲಗತ್ತಿಯವರು ತಮ್ಮ ನೋವಿನ ನಡುವಿನ ಹೋರಾಟದ ಬದುಕನ್ನು ನಿರ್ಲಪ್ತವಾಗಿ ಹೇಳುತ್ತಲೇ ಮನುಷ್ಯತ್ವ ಕಳೆದುಕೊಂಡಿರುವ ಈ ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸುವ ಧೋರಣೆಯಲ್ಲಿಯೇ ಆತ್ಮಕಥೆ ಸಾಗುತ್ತದೆಯಾದರೂ ಈ ವ್ಯವಸ್ಥೆಯ ಅಸಮಾನತೆಯನಡುವೆ ನೋವು, ಅಸಹಾಯಕತೆಯ ನಡುವೆ ಮೌನದ ಆಳದಿಂದ ಏಳುವ ಪ್ರಶ್ನೆಗಳಿಗೆ ಪರಿಹಾರ ಕಂಡುಕೊಳ್ಳುವ ಆಶಯವನ್ನು ಈ ಕೃತಿ ಸೂಕ್ಷ್ಮವಾಗಿ ಹೊರಹಾಕುತ್ತದೆ. ಈ ಆಶಯದ ಪ್ರತಿಮೆಯಾಗಿ ನಿಲ್ಲುವ ಲೇಖಕರ 'ಆಯಿ' ಈ ವ್ಯವಸ್ಥೆಯ ಕೂಪದಲ್ಲಿಯೂ ಜಾಣತನ, ಜಿಗಟುತನ, ತಾಯ್ತನದ ಒಡಲಿನಲ್ಲಿ ದಲಿತ ಬದುಕನ್ನು ಹಸನುಗೊಳಿಸುವ ಪ್ರಯತ್ನದಲ್ಲಿ ಆತ್ಮಕಥೆಯೊಳಗೆ ಗಟ್ಟಿಯಾಗಿ ನಿಲ್ಲುತ್ತಾಳೆ.

ಒಟ್ಟಿನಲ್ಲಿ ಮಾಲಗತ್ತಿಯವರ 'ಗೌರ್ಮೆಂಟ್‌ಬ್ರಾಹ್ಮಣ' ಎಲ್ಲಾ ದಲಿತ ಆತ್ಮಕಥೆಗಳಲ್ಲಿನ ಸಹಜ ಮೂರ್ತರೂಪವನ್ನು ಪಡೆದುಕೊಂಡಿದ್ದು ಸದಾಜೀವನ ಪ್ರೀತಿಯುಳ್ಳ, ಬದುಕಿಗಾಗಿ ತುಡಿಯುವ 'ಆಯಿ' ಯಂತಹ ತುಂಬುಜೀವಗಳು ದಲಿತರ ಅಂತಃಕರಣದ ಶಕ್ತಿಯಾಗಿ ಈ ಕೃತಿಯಲ್ಲಿ ಮಿಡಿದಿರುವುದು ಹಾಗೂ ಮಾಲಗತ್ತಿಯವರು ದಲಿತರ ಬದುಕಿನಲ್ಲಿ ಅದರಲ್ಲೂ ಶಿಕ್ಷಣ ಪಡೆಯುವ ವ್ಯವಸ್ಥೆಯೊಳಗೆ ಬರುವ ಪ್ರಜ್ಞಾವಂತ ದಲಿತರ ಬದುಕಿನಲ್ಲಿ ಎದುರಾಗುವ ತಲ್ಲಣಮಯ ಪ್ರಸಂಗಗಳನ್ನು ಹಿಡಿದಿಡುವಲ್ಲಿ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕೃತಿ ಯಶಸ್ವಿಯಾಗಿದ್ದು, ವಿಶಿಷ್ಟ ಕೃತಿಯಾಗಿ ಹೊರಹೊಮ್ಮಿರುವುದನ್ನು ಕಾಣಬಹುದು.

**ಆತ್ಮಕಥೆ : ಊರು-ಕೇರಿ**

ಕನ್ನಡ ಸಾಹಿತ್ಯದಲ್ಲಿನ ಮೊದಲ ಆತ್ಮಕಥೆ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯ ತರುವಾಯ ಕನ್ನಡದಲ್ಲಿ ದಾಖಲುಗೊಂಡ ಎರಡನೆ ದಲಿತ ಆತ್ಮಕಥೆಯೇ ಡಾ. ಸಿದ್ಧಲಿಂಗಯ್ಯರವರ 'ಊರು-ಕೇರಿ' ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯ ನೆಲೆಯಲ್ಲಿಯೇ ದಲಿತ ಬದುಕನ್ನು ತೆರೆದಿಡುತ್ತದೆಯಾದರೂ ಅನುಭವಗಳ ಅಭಿವ್ಯಕ್ತತೆಯಲ್ಲಿ ಆಳವಾದ ನೋವಿದೆಯಾದರೂ ಅದರ ಜೊತೆಯಲ್ಲಯೇ ತಿಳಿಹಾಸ್ಯ, ವ್ಯಂಗ್ಯತೆ, ವಿಡಂಬನೆಗಳು ಹಾಸುಹೊಕ್ಕಾಗಿರುವುದರಿಂದ ಡಾ. ಸಿದ್ಧಲಿಂಗಯ್ಯನವರ ಊರು-ಕೇರಿ ಆತ್ಮಕಥೆಯು ವಿಶಿಷ್ಟ ನೆಲೆಯಲ್ಲಿಯೇ ಓದುಗರನ್ನು ಸೆಳೆಯುತ್ತದೆ.

ದಲಿತ ಸಾಹಿತ್ಯದ ಮುಂಚೂಣಿ ಬರಹಗಾರರಾಗಿ ದಲಿತರ ಹೋರಾಟದ ದನಿಯಾಗಿ ನಿಂತ ಸಿದ್ಧಲಿಂಗಯ್ಯನವರು ತಮ್ಮ ಕ್ರಾಂತಿಕಾರಿ ಕಾವ್ಯಗಳ ಮೂಲಕವೇದಲಿತರ ಮನದಾಳದ ರೊಚ್ಚು, ಆಕ್ರೋಶಗಳನ್ನು ಹೊರಹಾಕುತ್ತಲೇ ದಲಿತರ ಪ್ರತಿಭಟನೆಯ ಶಕ್ತಿಯಾಗಿ ಕಾವ್ಯಗಳನ್ನು ರಚಿಸಿದವರು ಅಲ್ಲದೆ ಕಾವ್ಯಗಳ ರೂಪದಲ್ಲಯೇ ದಲಿತರ ದಾರುಣ ಹಸಿವು, ಅವಮಾನದ ಬದುಕನ್ನು ಬಿಚ್ಚಿಟ್ಟರಾದರೂ, ತದನಂತರದ ದಲಿತ ಮರಾಠಿ ಆತ್ಮಕಥೆಗಳಲ್ಲಿ ಇಂಬುಗೊಂಡ ಹಸಿ ಹಸಿಯಾದ ದಲಿತ ಬದುಕು ಆತ್ಮಕಥೆಯ ರೂಪ ದಡೆದ ತರುವಾಯ ಅದರ ಪ್ರೇರಣೆಯ ಫಲವಾಗಿಯೇ ಕನ್ನಡ ದಲಿತ ಸಾಹಿತ್ಯದಲ್ಲಯೂ ಗೌರ್ಮೆಂಟ್ ಬ್ರಾಹ್ಮಣ ಆತ್ಮಕಥೆಯ ನಂತರ'ಕವಿ ಸಿದ್ಧಲಿಂಗಯ್ಯನವರು ತಮ್ಮ ದಲಿತ ಬದುಕನ್ನು 'ಊರು-ಕೇರಿ'ಯ ರೂಪದಲ್ಲಿ ಅನಾವರಣಗೊಳಿಸಿದರು.

ಪ್ರಮುಖವಾಗಿ ಸಿದ್ಧಲಿಂಗಯ್ಯನವರ ಊರು-ಕೇರಿ ಆತ್ಮಕಥೆಐದು ಅಧ್ಯಾಯಗಳಲ್ಲಿ ಮೈದಾಳಿರುವುದನ್ನು ಕಾಣಬಹುದು.

೧. ಬಾಲ್ಯದ ಶಾಲೆಯ। ಮೊದಲ ದಿನಗಳು

೨. ತದನಂತರದ ಶಾಲೆಯ ದಿನಗಳು

೩. ವಿದ್ಯಾರ್ಥಿನಿಲಯದಲ್ಲಿನ ದಿನಗಳು

೪.	ಕಾಲೇಜು ಹಂತದಜೀವನ

೫.	ತದನಂತರದ ಪ್ರಬುದ್ಧತೆಯ ಬೇರೆ ಬೇರೆ ಪ್ರಗತಿಪರ ಹೋರಾಟಗಳು, ಚಳುವಳಿಗಳು, ವ್ಯಕ್ತಿಗಳೊಂದಿಗಿನ ಒಡನಾಟದ ಅನುಭವಗಳು ಅನುಕ್ರಮವಾಗಿ ಊರುಕೇರಿಯಲ್ಲಿ ಹರಿದಾಡಿರುವುದ್ನು ಕಾಣಬಹುದು.

ಈ ಹಿನ್ನೆಲೆಯಲ್ಲಿ ನೋಡಿದಾಗ 'ಗೌರ್ಮೆಂಟ್ ಬ್ರಾಹ್ಮಣ'ದಂತೆಯೇ ಸಿದ್ಧಲಿಂಗಯ್ಯನವರ 'ಊರು-ಕೇರಿ' ಯು ಮುಖ್ಯವಾಗಿ ಅವರ ಬಾಲ್ಯದ ದಿನಗಳ ಅನುಭವಗಳನ್ನೇ ಹೆಚ್ಚು ಹಿಡಿದಿಟ್ಟಿರುವುದನ್ನು ಕಾಣಬಹುದು. ಯಾವುದೇವ್ಯಕ್ತಿಯ ಬದುಕಿನಲ್ಲಿ ಬಾಲ್ಯ ಹಾಗೂ ಹದಿಹರೆಯದ ದಿನಗಳು ಆ ವ್ಯಕ್ತಿಯ ಬದುಕನ್ನು ರೂಪಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತವೆ. ಅಂತೆಯೇ ಸಿದ್ಧಲಿಂಗಯ್ಯನವರ ಆತ್ಮಕಥೆಯಲ್ಲಿ ದಾಖಲಾಗಿರುವ ಅವರ ಬಾಲ್ಯದ ಅನುಭವಗಳು ಅವರ ಮುಂದಿನ ಹೋರಾಟದ ಬದುಕಿಗೆ ಪುಷ್ಠಿನೀಡಿರುವುದನ್ನು ಊರು-ಕೇರಿಯ ಅವರ ಬದುಕಿನ ಪುಟುಗಳಲ್ಲಿಯೇ ಕಾಣಬಹುದು.

ಸಿದ್ಧಲಿಂಗಯ್ಯನವರ ನೋವು, ಬಡತನದ ಬಾಲ್ಯದ ಬದುಕು ತೆರೆದುಕೊಳ್ಳುವುದೇ ತನ್ನ ತಾಯಿಯ ಊರಾದ ಮಂಚನಬೆಲೆಯ ದಲಿತ ಕೇರಿಯಿಂದಲೇ. ಹಾಗಾಗಿಯೇ ಆತ್ಮಕಥೆಯ ಆರಂಭದ ಪುಟಗಳಲ್ಲಿಯೇ ಲೇಖಕರು ಹೇಳುವ ' ಛಾವಣಿಗಳನ್ನು ಕಾಣದ ಬಿರುಕುಗೊಂಡ ಮಣ್ಣಿನ ಮೋಟುಗೋಡೆಗಳೆ ದಲಿತರ ಆಶ್ರಯತಾಣಗಳು. ಇನ್ನೊಂದೆಡೆ ಸುಂದರವಾಗಿ ಕಾಣುವ ಐನೂರ ಮನೆ, ಪಂಪ್‌ಸೆಟ್‌ನಿಂದ ಕೂಡಿದ ಐನೊರ ತೋಟ, ಗದ್ದೆಗಳು, ಇನ್ನೂ ಕುಟುಂಬದಹಸಿವನ್ನು ನೀಗಿಸಲು ಜೀತದ ಎತ್ತುಗಳಾಗಿ ದುಡಿಯುತ್ತಿರುವ ಲೇಖಕರ ತಂದೆ-ತಾಯಿಗಳು, ಈ ಪ್ರಸಂಗಗಳು ಸಿದ್ಧಲಿಂಗಯ್ಯನವರ ಕುಟುಂಬದಲ್ಲಿದ್ದ ಹಸಿವಿನ ದಾರುಣತೆಯನ್ನು ಸಾರುವುದಲ್ಲದೆ ಇಡೀ ದಲಿತ ಬದುಕಿನ ಶೋಚನೀಯ ಸ್ಥಿತಿಯನ್ನು ತಿಳಿಸುತ್ತಲೆ ಈ ಸಮಾಜದ ಸಾಮಾಜಿಕ ವ್ಯವಸ್ಥೆಯ ಅಸಮಾನತೆಯನ್ನು ಆವ್ಯವಸ್ಥೆಗೆ ಸಿಕ್ಕಿ ನರಳುತ್ತಿರುವ ದಲಿತರ ಬದುಕನ್ನು ಸಿದ್ಧಲಿಂಗಯ್ಯನವರ ಊರು ಕೇರಿಯ ಪ್ರಸಂಗಗಳು ತೆರೆದಿಡುತ್ತಾ ಸಾಗುತ್ತದೆ.

ಈ ಆತ್ಮಕಥೆಯ ನೋವಿನ ಹಂದರದೊಳಗೆ ಸುಳಿದಾಡುವ ಲೇಖಕರು ದಲಿತರಾಗಿ ಹುಟ್ಟಿ ಬಾಲ್ಯದುದ್ದಕ್ಕೂ ಹಸಿವು, ಬಡತನ, ನೋವು, ಅಪಮಾನಗಳನ್ನು ಅನುಭವಿಸುತ್ತಲೇ ಈ ಅಸಮಾನ ಸಮಾಜವನ್ನು ತಮ್ಮ ಬಾಲ್ಯದ ಬೆರಗುಗಣ್ಣಿನಿಂದ ನೋಡುತ್ತಾ ಅದಕ್ಕೆ ಪ್ರತಿಕ್ರಿಯಿಸುತ್ತಲೇ ಬೆಳೆದವರು ಹಾಗಾಗಿಯೇ ಅವರ ಬಾಲ್ಯದ ಬದುಕಿನ ಸುತ್ತ ದಲಿತರ ಶೋಷಿತ ಬದುಕಿನ ಸಿತ್ಯಂತರಗಳು ಗಾಢವಾಗಿ ಸುಳಿದಾಡಿರುವುದನ್ನು ಕಾಣಬಹುದು.

ಈ ಸ್ಥಿತ್ಯಂತರಗಳ ಜೊತೆಯಲ್ಲಿ ಸಿದ್ಧಲಿಂಗಯ್ಯನವರ ಬಾಲ್ಯದ ಬದುಕು ಬಡತನವನ್ನು ನುಂಗುತ್ತಲೇ ಅವರಲ್ಲಿದ್ದ ತುಂಟತನ, ಕಲಿಕೆಯ ತುಡಿತದ ಪ್ರತಿಭೆಗಳು ಅವರ ನೋವನ್ನು ಮರೆಮಾಚುತ್ತಲೇ ಅವರ ಬದುಕಿನ ದಾರಿಗೆ ಬೆಳಕಾಗಿರುವುದನ್ನು ಗುರುತಿಸಬಹುದು.

ಈ ಹಿನ್ನೆಲೆಯಲ್ಲಿಯೇ ವಿಮರ್ಶಕರಾದ ಡಿ.ಆರ್. ನಾಗರಾಜ್‌ರವರು 'ಊರು-ಕೇರಿ'ಯನ್ನು ಕುರಿತು ಬರೆಯುತ್ತಾ 'ಬಡತನ ಮತ್ತು ಪ್ರತಿಭೆಗಳ ನಡುವಣದ ಸಂಬಂಧ ಊರುಕೇರಿಯ ಒಂದು ಮುಖ್ಯ ವಸ್ತು. ಸಿದ್ಧಲಿಂಗಯ್ಯನವರ ಆತ್ಮಕಥೆಯಲ್ಲಿ ದಲಿತ ಲೇಖಕರಲ್ಲಿ ನಾವು ಗುರುತಿಸುವ ಅನೇಕ ಅಂಶಗಳಿವೆ. ಬಡತನ, ರೊಚ್ಚು, ಅಪಮಾನ, ಇತ್ಯಾದಿಗಳೆಲ್ಲ ಇವೆ. ಆದರೆ ಇಡೀ ಕೃತಿಯಲ್ಲಿ ಹೊಸದಾದ ಅನಿರೀಕ್ಷಿತವಾದ ಒಂದು ಮುಖ್ಯಾಂಗವೂ ಇದೆ. ಅದು ಬಡತನ ಮತ್ತು ಹಿಂಸೆಯ ಬಗ್ಗೆ ಭೀತಿಯ ಗೈರು ಹಾಜರಿ'ಎಂದು ಉಲ್ಲೇಖಿಸುತ್ತಾರೆ. ಹಾಗಾಗಿಇಲ್ಲಿ ಸಿದ್ಧಲಿಂಗಯ್ಯನವರ ಊರು ಕೇರಿ ನೋವಿನ, ಅವಮಾನದ ಮೂರ್ತರೂಪದಂತಿರದೆ ಆ ನೋವು, ಅಪಮಾನಗಳನ್ನು ಗೆಲ್ಲುವ ಪ್ರತಿಭಾವಿಲಾಸ ತನವು ಊರುಕೇರಿಯಲ್ಲಿ ಅಡಗಿರುವುದನ್ನು ಗ್ರಹಿಸಬಹುದು. ಈ ನೆಲೆಯಲ್ಲಿಯೇ ಊರುಕೇರಿ ಭಿನ್ನರೂಪದಲ್ಲಿ ನಮ್ಮನ್ನು ಆವರಿಸುತ್ತದೆ.

ಈ ಆತ್ಮಕಥೆಯ ಇನ್ನೊಂದು ವಿಶೇಷತೆಯೆಂದರೆ ತಮ್ಮ ದಲಿತ ಬದುಕಿನ ಹಿಂಸೆ, ಬಡತನ, ನೋವುಗಳನು ಯಥಾವತ್ತಾಗಿ ತೆರೆದಿಡುವ ಸಿದ್ಧಲಿಂಗಯ್ಯನವರು, ತಮ್ಮ ಮನಸ್ಸಿನ ಆಳದಲ್ಲಿ ಮಡುಗಟ್ಟಿರುವ ನೋವನ್ನು ಎಲ್ಲಿಯೂ ಪ್ರತಿಭಟನೆಯ ರೂಪದಲ್ಲಿ ಹೊರಚೆಲ್ಲದೆ ಹಾಸ್ಯದ ಲೇಪನ ಬೆರೆಸಿ ಅನುಭವಗಳನ್ನು ಹಂಚಿಕೊಳ್ಳುವ ಧೀಮಂತಿಕೆಯನ್ನು ಮೆರೆದಿದ್ದಾರೆ. ತಮ್ಮ ಇಡೀ ಕಾವ್ಯದ ಮೂಲಕ ಮನದಾಳದ ಸಿಟ್ಟು,

ಆಕ್ರೋಶವನ್ನು ನಿರ್ಭಿಡತೆಯಿಂದ ಹರಿಯಬಿಡುವ ಲೇಖಕರು ಆತ್ಮಕಥೆಯ ಹಂದರದೊಳಗೆ ತಣ್ಣನೆಯಾಗಿ ಪ್ರತಿಕ್ರಿಯಿಸಿರುವುದನ್ನು ಅರಿಯಬಹುದು. ಈ ಹಿನ್ನೆಲೆಯಲ್ಲಿ ಗ್ರಹಿಸಿದಾಗ ಊರು-ಕೇರಿ ವಿಶೇಷ ನೆಲೆಯಲ್ಲಿ ನಿಲ್ಲುತ್ತದೆ.

ಸಿದ್ಧಲಿಂಗಯ್ಯನವರ ಆತ್ಮಕಥೆಯಲ್ಲಿನ ಮುಖ್ಯ ನೆಲೆಯನ್ನು ಗುರ್ತಿಸುವುದಾದರೆ ತಮ್ಮ ಇಡೀ ಆತ್ಮಕಥೆಯಲ್ಲಿ ಯಾವ ಪೂರ್ವಾಗ್ರಹವೂ ಇಲ್ಲದೆ, ಎಲ್ಲಿಯೂ ವೈಭವೀಕರಿಸದೆ ಯಥಾವತ್ತಾಗಿ ತಮ್ಮ ಬದುಕಿನ ಅನುಭವಗಳನ್ನು ಹರಿಯ ಬಿಟ್ಟಿರುವುದನ್ನು ಮನಗಾಣಬಹುದು. ಉದಾಹರಣೆಗೆ ಅವರ ಇಡೀ ಆತ್ಮಕಥೆಯಲ್ಲಿ ಮನುಷ್ಯತ್ವವನ್ನು ಮೀರಿ ನಿಲ್ಲುವ ಅವರ ಬಾಲ್ಯದ ಈ ಪ್ರಸಂಗ ಯಾರನ್ನಾದರೂ ಕಾಡದೆ ಇರಲಾರದು ಎಂದಿನಂತೆ ಹುಡುಗರೆಲ್ಲ ನಮ್ಮ ಮನೆಯ ಪಕ್ಕದ ಮೋಟುಗೋಡೆಯ ಮೇಲೆ ನಿಂತು ಅಪ್ಪ ಅವ್ವಂದಿರನ್ನು ಕೂಗುತ್ತಿದ್ದಾಗ ನಮಗೆ ಒಂದು ನೋಟ ಕಾಣಿಸಿತು. ಐನೋರ ಹೊಲದಲ್ಲಿ ಇಬ್ಬರು ಮನುಷ್ಯರ ಹೆಗಲ ಮೇಲೆ ನೊಗ ಹೂಡಿ ಇನ್ನಿಬ್ಬರು ಹೊಲ ಊಳುತ್ತಿದ್ದರು. ನೊಗ ಹೊತ್ತ ಆ ಇಬ್ಬರು ಮನಷ್ಯರು ಎತ್ತುಗಳಂತೆ ಮುಂದೆ ಹೋಗುತ್ತಿದ್ದರೆ ಇನ್ನೊಬ್ಬ ಹಿಂದಿನಿಂದ ಚಾಟಿ ತಿರುಗಿಸುತ್ತಾ ಉಳುಮೆ ಮಾಡುತ್ತಿದ್ದ ದೃಶ್ಯ ಮೋಜಿನಂತೆ ಕಂಡರೂ ನೊಗ ಹೊತ್ತಿದ್ದ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬ ನನ್ನ ಅಪ್ಪ ಎಂದು ಗೊತ್ತಾದ ಕ್ಷಣದಿಂದ ನನ್ನಲ್ಲಿ ವಿಚಿತ್ರವಾದ ಸಂಕಟ ಶುರುವಾಯಿತು. ಈ ಸನ್ನಿವೇಶವನ್ನು ಹತಾಶೆ, ಸಿಟ್ಟು, ನೋವಿನ ನಡುವೆಯೂ ಸಂಯಮದಿಂದಲೇ ಹೇಳಿಕೊಳ್ಳುತ್ತಾರೆ.

ಇಂತಹ ಅವರ ಮನಸ್ಸನ್ನು ನಾಟಿರುವ ಅನೇಕ ನೋವು, ಅಪಮಾನದ ಪ್ರಸಂಗಗಳನ್ನು ಬಿಚ್ಚುಮನಸ್ಸಿನಿಂದ ಹೇಳುತ್ತಾ ಹೋಗುತ್ತಾರೆ. ಕುಟುಂಬದಹಸಿವನ್ನು ನೀಗಿಸಲು, ಸೌದೆ ಒಡೆಯಲು ಹೋಗುತ್ತಿದ್ದ ಅಪ್ಪ, ಕಾಡಿನಿಂದ ಸೌದೆ ತಂದು ಮನೆಮನೆಗಳಿಗೆ ಹೊತ್ತು ಮಾರುತ್ತಿದ್ದ ತಾಯಿ, ಅದರ ನಡುವೆಯೂ ಸಾಲ ತೀರಿಸಲಾಗದ ತಂದೆಯ ಮೇಲೆ ನಡೆಯುತ್ತಿದ್ದ ಲೇವಾದೇವಿಗಾರರ ದೈಹಿಕ ಹಲ್ಲೆ, ತಾನು ಓದುತ್ತಿದ್ದ ವಿದ್ಯಾರ್ಥಿನಿಲಯದಲ್ಲಿಯೇ ಕಸಗುಡಿಸುವಕೆಲಸ ಮಾಡುತ್ತಿದ್ದ ತಾಯಿ. ತಾಯಿ ಕೊಟ್ಟ ತಂಗಳು ಮುದ್ದೆಯನ್ನು ಬ್ಯಾಗಿನಲ್ಲಿ ಬಚ್ಚಿಟ್ಟುಕೊಳ್ಳುತ್ತಿದ್ದುದನ್ನು ನೋಡಿ ಅಪಹಾಸ್ಯ ಮಾಡುತ್ತಿದ್ದ ಸಹಪಾಠಿ ಹುಡುಗರು, ಇಂತಹ ಕ್ರೂರನೋವು, ಅಪಮಾನಗಳ ನಡುವೆಯೂ 'ನಾಗಪ್ಪಚಾರ್, ಅಂಡಾಳಮ್ಮ ಎಂಬ ಗುರುಗಳಿಂದ ಸಿಗುತ್ತಿದ್ದ ಮನುಷ್ಯ

ಪ್ರೀತಿ, ಹಸು, ಕುರಿ, ಮುಂತಾದಸಾಕುಪ್ರಾಣಿಗಳೊಂದಿಗೆ ಹೆಣೆದು ಕೊಂಡಿದ್ದ ಸಂಬಂಧ. ಶಾಲಾ-ಕಾಲೇಜುದಿನಗಳಲ್ಲಿ ಕಲಿಕೆಗೆ ಸಿಗುತ್ತಿದ್ದ ಪ್ರೋತ್ಸಾಹಗಳನ್ನು ಯಾವುದೇ ಉತ್ಪ್ರೇಕ್ಷೆ ಇಲ್ಲದೆ ತಣ್ಣನೆಯ ಮನಸ್ಸಿನಲ್ಲಿಯೇ ಹೇಳಿಕೊಳ್ಳುವ ಸಿದ್ಧಲಿಂಗಯ್ಯನವರಲ್ಲಿ ಮಾತೃಸಂವೇದನೆಯ ಗುಣವನ್ನು ಕಾಣಬಹುದು.

ಇದರ ಜೊತೆಗೆ ಲೇಖಕರ ಬದುಕಿಗಷ್ಟೇ ಸೀಮಿತವಾಗದ ಆತ್ಮಕಥೆ, ಅದರ ಸುತ್ತಲಿನ ಸಾಮಾಜಿಕ ಬದುಕನ್ನು ಪ್ರತಿಬಿಂಬಿಸುತ್ತದೆ. ಊರು-ಕೇರಿಯ ಪರಿಸರದಲ್ಲಿ ನಡೆಯುತ್ತಿದ್ದ ಜಗಳಗಳು, ಅಲ್ಲಿದ್ದ ಪುಡಿರೌಡಿಗಳ ಕಾಟ. ಅವರ ಚಟುವಟಿಕೆಗಳು, ಕುಡುಕರ ಹಾವಳಿ, ಕುಟಂಬದಲ್ಲಿ ನಡೆಯುತ್ತಿದ್ದ ಗಂಡ ಹೆಂಡಿರ ಜಗಳಗಳು, ಆಲ್ಲಿ ಮನೆ ಮಾಡಿದ್ದ ಧಾರ್ಮಿಕ ಮೌಢ್ಯಗಳು, ದೇವರು, ದೆವ್ವ, ಮಾಟ-ಮಂತ್ರಗಳ ಬಗೆಗಿನ ನಂಬಿಕೆ ಆಚರಣೆಗಳು, ಇಡೀ ಆತ್ಮಕಥೆಯಲ್ಲಿಜೀವಂತಿಕೆಯ ರೂಪ ಪಡೆದು ಆತ್ಮಕಥೆಯಲ್ಲಿ ಹರಿದಾಡಿರುವುದನ್ನು ಕಾಣಬಹುದು. ಇದರಜೊತೆಗೆ ಸಮುದಾಯದಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ಹಬ್ಬಗಳು, ಜಾತ್ರೆಗಳು, ಉತ್ಸವ, ಊಟೋಪಚಾರ, ಆಟನೋಟಗಳನ್ನು ಚಿತ್ರಮಯವಾಗಿ ಲೇಖಕರು ಹಿಡಿದಿಟ್ಟಿದ್ದಾರೆ. ಬಹಳ ಮುಖ್ಯವಾಗಿ ವಿದ್ಯೆ ಮತ್ತು ನಾಗರೀಕತೆಗೆ ಮುಖ ಮಾಡಿ ಸಮಾಜದ ಬದಲಾವಣೆಗೆ ತುಡಿಯುತ್ತಿರುವ ದಲಿತ ಸಮುದಾಯದ ಬದುಕಿನ ಚಿತ್ರಣ ಊರುಕೇರಿ ಆತ್ಮಕಥೆಯಲ್ಲಿ ಮೂಡಿರುವುದನ್ನು ಕಾಣಬಹುದು.

ಇವುಗಳನ್ನು ಮೀರಿ ಸಮಾಜಮುಖಿ, ಪ್ರಗತಿಪರ ಪ್ರಬುದ್ಧ ಚಿಂತನೆಗಳಿಗೆ ಇಂಬುಗೊಡುವ ಬುದ್ಧ, ಬಸವ, ಅಂಬೇಡ್ಕರ್, ಗಾಂಧೀಯವರ ಚಿಂತನೆಗಳು ಹಾಗೂ ಪ್ರಭಾವ, ಚಳುವಳಿಯ ನೇತಾರರಾದ, ಗೋಪಾಲಗೌಡರು, ಜಯಪ್ರಕಾಶನಾರಾಯಣರು, ಪೆರಿಯಾರ್ ಚಿಂತನೆಗಳು, ಬಸವಲಿಂಗಪ್ಪನವರ 'ಬೂಸಪ್ರಕರಣಗಳು', ಊರು-ಕೇರಿ ಆತ್ಮಕಥೆಯಲ್ಲಿ ಸ್ಥಾನ ಪಡೆದಿದ್ದು ಸಿದ್ದಲಿಂಗಯ್ಯನವರ ಪ್ರಬುದ್ಧ ಬೆಳವಣಿಗೆಯಲ್ಲಿ ಮುಖ್ಯ ಪಾತ್ರವಹಿಸಿರುವುದನ್ನು ಮನಗಾಣಬಹುದು.

ಒಟ್ಟಾರೆ ಸಿದ್ಧಲಿಂಗಯ್ಯನವರು ತಮ್ಮ ಊರು-ಕೇರಿ ಆತ್ಮಕಥೆಯಲ್ಲಿ ತಮ್ಮ ಬದುಕನ್ನು ಹೇಳುತ್ತಲೇ ಇಡೀ ದಲಿತ ಸಮಾಜದ ಬದುಕನ್ನು ಕಾಣಿಸುತ್ತಾರೆ. ಬದುಕಿನ ನೋವು ಅಪಮಾನಗಳನ್ನು ಹೇಳುತ್ತಲೇ ಹಾಸ್ಯದ ಲೇಪವನ್ನು ಬೆರೆಸಿ ಓದುಗರನ್ನು

ಗಂಭೀರ ಚಿಂತನೆಗಳೊಳಪಡಿಸುತ್ತಲೇ ಹಾಸ್ಯದ ಬೇರೊಂದು ಲೋಕಕ್ಕೆ ಕರೆದೊಯ್ಯುತ್ತಾರೆ. ದಲಿತ ಬದುಕಿನ ಸ್ಥಿತ್ಯಂತರಗಳನ್ನು ತೆರೆದಿಡುತ್ತಲೇ ನಗುವಿನ ಶಕ್ತಿಯನ್ನು ತುಂಬುತ್ತಾರೆ. ಈ ನಿಟ್ಟಿನಲ್ಲಿ ಊರು-ಕೇರಿ ಆತ್ಮಕಥೆ, ಕನ್ನಡ ಸಾಹಿತ್ಯದ ಪ್ರಮುಖ ಆತ್ಮಕಥೆಗಳ ಸಾಲಿನಲ್ಲಿ ನಿಲ್ಲುತ್ತದೆ.

**ಆತ್ಮಕಥೆ : ಮಣೆಗಾರ**

ಕನ್ನಡ ದಲಿತ ಸಾಹಿತ್ಯಕ್ಕೆ ತಮ್ಮ ಚೊಚ್ಚಲ ಕೃತಿಯಾದ 'ಮಣೆಗಾರ' ಹೆಸರಿನ ಆತ್ಮಕಥೆಯನ್ನು ದಾಖಲಿಸುವ ಮೂಲಕ ಸೃಜನಶೀಲ ಬರವಣಿಗೆಗೆ ತಮ್ಮನ್ನು ತೊಡಗಿಸುಕೊಳ್ಳುತ್ತಿರುವ ದಲಿತ ಚಿಂತಕರಾದ ತುಂಬಾಡಿ ರಾಮಯ್ಯನವರು ಕನ್ನಡ ದಲಿತ ಸಾಹತ್ಯದ ಅಪರೂಪದ ಬರಹಗಾರರು.

ದಲಿತ ಸಮುದಾಯದಲ್ಲಿ ಹುಟ್ಟಿ ದಲಿತಬದುಕಿನ ದಾರುಣತೆಯ ಸ್ಥಿತ್ಯಂತರಗಳನ್ನು ಅನುಭವಿಸಿರುವ ತುಂಬಾಡಿ ರಾಮಯ್ಯನವರು ಬಡತನದ ನಡುವೆಯೂ ಶಿಕ್ಷಣವನ್ನು ಪಡೆದು ವಿದ್ಯಾರ್ಥಿದಿಸೆಯಿಂದಲೇ ಹೋರಾಟ, ಚಳುವಳಿಗಳ ಒಡನಾಟದಲ್ಲಿ ಬೆಳೆದು ಪ್ರಬುದ್ಧ ದಲಿತ ಚಿಂತಕರಾಗಿ, ದಲಿತ ಚ ಳುವಳಿಯ ಮುಂಚೂಣಿ ನಾಯಕರಾಗಿ ಗುರ್ತಿಸಿಕೊಂಡಿರುವ ತುಂಬಾಡಿರಾಮಯ್ಯನವರು 'ತಮ್ಮ ಚೊಚ್ಚಲ ಕೃತಿ 'ಮಣೆಗಾರ' ಆತ್ಮಕಥೆಯ ಮೂಲಕ ತಮ್ಮ ದಲಿತ ಬದುಕನ್ನು ತೆರೆದಿಟ್ಟಿದ್ದಾರೆ.

ಕನ್ನಡ ದಲಿತ ಆತ್ಮಕಥೆಗಳಲ್ಲಿ ಗೌರ್ಮೆಂಟ್‌ಬ್ರಾಹ್ಮಣ, ಊರುಕೇರಿ ಆತ್ಮಕಥೆಗಳ ನಂತರ ದಲಿತ ಬದುಕನ್ನು ಹೊದ್ದು ಮೈದಾಳಿರುವ ತುಂಬಾಡಿಯವರ 'ಮಣೆಗಾರ ಆತ್ಮಕತೆಯು ಕನ್ನಡದ ಮೂರನೇ ದಲಿತ ಆತ್ಮಕಥೆಯಾಗಿದ್ದು ಗೌರ್ಮೆಂಟ್ ಬ್ರಾಹ್ಮಣ, ಊರುಕೇರಿ ಆತ್ಮಕಥೆಗಳಂತೆಯೇ ಭಿನ್ನನೆಲೆಯಲ್ಲಿ ಸಾಗುತ್ತದೆ.

ನಾನು ಈ ಅಧ್ಯಾಯದ ಆರಂಭದ ಪುಟಗದಲ್ಲಿಯೇ ಉಲ್ಲೇಖಿಸಿರುವಂತೆ ದಲಿತ ಆತ್ಮಕಥೆಗಳು ತಮ್ಮ ಒಡಲಿನಲ್ಲಿ ಹಿಡಿದಿಟ್ಟಿರುವ ಬದುಕಿನ ಹಸಿ ಅನುಭವಗಳಿಂದಷ್ಟೇ ವಿಶೇಷವೆನಿಸದೆ ತಮ್ಮ ಆತ್ಮಕಥೆಗಳ ತಲೆಬರಹದಿಂದಲೇ ಇತರ ಆತ್ಮಕಥೆಗಳಿಗಿಂತ ಭಿನ್ನ ನೆಲೆಯಲ್ಲಿ ನಿಂತು ಓದುಗರನ್ನು ಹೆಚ್ಚು ಸೆಳೆಯುತ್ತವೆ. ಅಂತೆಯೇ 'ಮಣೆಗಾರ' ಆತ್ಮಕಥೆಯ

ವಿಶೇಷತೆ ಅಡಗಿರುವುದೇ ಅದರ ತಲೆಬರಹದಲ್ಲಿ . ಈಜಾತಿವ್ಯವಸ್ಥಿತ ಸಮಾಜ ಗುರ್ತಿಸುವ ಮಣೆಗಾರ (ಮಾದಿಗರು) ಸಮುದಾಯದಲ್ಲಿ ಹುಟ್ಟಿದ ತುಂಬಾಡಿರಾಮಯ್ಯನವರು ನಿರ್ಭಿಡತೆಯಿಂದ ತಮ್ಮ ಕೃತಿಗೆ ತಮ್ಮ ಜಾತಿಯ ಕುರುಹಾದ 'ಮಣೆಗಾರ' ಎಂದೇ ಕರೆದುಕೊಂಡಿರುವುದು ಆತ್ಮಕಥೆಗೆ ಹೆಚ್ಚು ಮೆರುಗನ್ನು ನೀಡುತ್ತದೆ.

ತುಂಬಾಡಿ ರಾಮಯ್ಯನವರು 'ಮಣೆಗಾರ' ಆತ್ಮಕಥೆಯ ಮೂಲಕ ತಮ್ಮ ಬದುಕಿನ ಅನುಭವಗಳನ್ನು ಬಾಲ್ಯ, ವಿದ್ಯಾರ್ಥಿದಿನಗಳಲ್ಲಿನ ಬದುಕು ಮತ್ತು ಪ್ರಬುದ್ಧತೆಯ ನಂತರದ ಹೋರಾಟ, ದಲಿತಚಳುವಳಿಯೊಳಗಿನ ಬದುಕನ್ನು ಎರಡು ಭಾಗಗಳಾಗಿ ವಿಭಾಗಿಸಿ ಕೃತಿಯಲ್ಲಿ ಹಿಡಿದಿಟ್ಟಿದ್ದಾರೆ.

ಬಹಳ ಮುಖ್ಯವಾಗಿ ಈ ಕೃತಿಯ ಭಿನ್ನತೆಯನ್ನು ಗುರುತಿಸುವುದಾದರೆ ಈ ಆತ್ಮಕಥೆಯು ಒಬ್ಬ ದಲಿತ ವ್ಯಕ್ತಿಯ ಬದುಕನ್ನು ಕೇಂದ್ರೀಕರಿಸಿ ರೂಪುಗೊಂಡಿರುವುದಕ್ಕಿಂತಲೂ ಸಮುದಾಯ ಕೇಂದ್ರಿತವಾಗಿ ಕೃತಿ ರೂಪುಗೊಂಡಿರುವುದನ್ನು ಕಾಣಬಹುದಾಗಿದೆ. ಅಂದರೆ ಈ ಕೃತಿಯಲ್ಲಿ ಲೇಖಕರ ಸ್ವಾನುಭವಗಳಿಗಿಂತ ಸಮಷ್ಠಿಯ ಅನುಭವಗಳೇ ಸಾಂದ್ರವಾಗಿ ಹರಿದಾಡಿರುವುದನ್ನು ಕಾಣಬಹುದು.

ಮೂಲತಃ ತಳಸಮುದಾಯದ ಚಪ್ಪಲಿ ಹೊಲೆಯುವ ಕಾಯಕದ ಕೌಟುಂಬಿಕ ಹಿನ್ನೆಲೆಯಿಂದ ಬಂದ ತುಂಬಾಡಿ ರಾಮಯ್ಯನವರು ದಾರುಣವಾದ ಬಡತನ, ಹಸಿವು, ಅಭದ್ರತೆ ಮತ್ತು ಅಪಮಾನಗಳನ್ನು ಎದುರಿಸುತ್ತಲೇ ಹೋರಾಟದ ಬದುಕನ್ನು ಕಂಡುಕೊಂಡವರು. ಆದರೂ ಹಸಿವು ಬಡತನಗಳಷ್ಟೇ ಈ ಕೃತಿಯಲ್ಲಿ ಮುಖ್ಯವಾಗುವುದಿಲ್ಲ. ನಿರಂತರವಾಗಿ ಹಾತೊರೆಯುವತಿಳಿಯಾದ ಮನಸ್ಥಿತಿಯನ್ನು 'ಮಣೆಗಾರ' ಕೃತಿ ಬಯಸುತ್ತಾ ಸಾಗುತ್ತದೆ. ತಮ್ಮನ್ನು ಅಪಮಾನ ಮಾಡುವ, ಅಸ್ಪೃಶ್ಯತೆ ಆಚರಿಸುವ ಮನಸ್ಸುಗಳ ವಿರುದ್ಧ ಲೇಖಕರು ಘಾಸಿಗೊಳ್ಳುವುದಿಲ್ಲ. ಬದಲಾಗಿ ಅಪಾರವಾದ ನೋವು ಮತ್ತು ವಿಷಾದದ ಮನಸ್ಸಿನಿಂದ ಅನಾರೋಗ್ಯಕರ ಸ್ಥಿತಿಗಾಗಿ ಕನಿಕರಿಸಿರುವುದನ್ನು ಕೃತಿಯಲ್ಲಿ ಕಾಣಬಹುದು.

'ಮಣೆಗಾರ' ಆತ್ಮಕತೆಯಲ್ಲಿ ತುಂಬಾಡಿ ರಾಮಯ್ಯನವರು ತಮ್ಮ ಕುಟುಂಬದ ಬಡತನ, ಮಾಡುತ್ತಿದ್ದ ವೃತ್ತಿ, ತಮ್ಮ ಬಾಲ್ಯದ ದಿನಗಳು, ಶಾಲಾ ಕಾಲೇಜು ದಿನಗಳು, ತಾವುದಲಿತ ಸಂಘರ್ಷ ಸಮಿತಿಯ ಸಂಚಾಲಕರಾಗಿ ನಡೆಸಿದ ಹೋರಾಟ, ತಮ್ಮ ನೌಕರಿಯ ದಿನಗಳು, ಬದುಕಿನ ಸಾಧನೆ, ವೈಫಲ್ಯಗಳನ್ನು ಮುಖ್ಯವಾಗಿ ತಮ್ಮ ಆತ್ಮಕಥೆಯಲ್ಲಿ ದಾಖಲಿಸಿದ್ದಾರೆ. ಅಲ್ಲದೆ ಅನುಭವದ ಹಂದರದೊಳಗೆ ಅಡಗಿರುವ ರಾಮಯ್ಯನವರ ಮಾಗಿದ ಮನಸ್ಸು, ಪ್ರಬುದ್ಧ ಚಿಂತನೆಗಳು ಅವರು ಸಾಗಿಬಂದ ಬದುಕಿನ ಚಿತ್ರಣವನ್ನು ನೀಡುತ್ತವೆ.

ಮಣೆಗಾರ ಆತ್ಮಕಥೆ ತೆರೆದು ಕೊಳ್ಳುವುದೇ ಲೇಖಕರ ದಟ್ಟವಾದ ಬಡತನದ ಹಂದರದಲ್ಲಿಯೇ 'ಹೊರಗಡೆ ಮಲ ಗಿದರೆ ಚಳಿ, ಒಳಗೆ ಮಲಗಿದರೆ ತಿಗಣೆ ಕಾಟ, ನಮಗಿದ್ದ ಒಂದೊಂದೆ ಅಂಗಿಚಡ್ಡಿಗಳು ಅವುಗಳನ್ನು ಮುತ್ತಿದ್ದ ಕೂರೆಗಳು, ಮತ್ತು ತಿಗಣೆಗಳು......ಇಂತಹ ಪ್ರಸಂಗಗಳು ಲೇಖಕರ ಕುಟುಂಬವನ್ನು ಕಾಡುತ್ತಿದ್ದ ಆರ್ಥಿಕ ಬಡತನವನ್ನು ಹಾಗೂ ಅಸಮಾನತೆಯ ರೂಪದಲ್ಲಿ ಕಾಡುತ್ತಿದ್ದಸಾಮಾಜಿಕ ಬಡತನವನ್ನು ಬಿಂಬಿಸುತ್ತವೆ. ಅಲ್ಲದೆ ದಲಿತರ ಮೇಲೆ ಹೇರಿದ್ದ ಧಾರ್ಮಿಕ ನಿಷೇಧಗಳ, ದಲಿತರ ಮನೆದೇವತೆಯಾದ ವೀರನಾಗಮ್ಮನ ಗುಡಿಗೆ ದಲಿತರೆ ಹೋಗದಿರುವುದು. ತನ್ನ ಪ್ರಾಮಾಣಿಕ ನಡುವಳಿಕೆಯನ್ನು ಸಹಿಸದ ಶಿಕ್ಷಕರುಗಳ ಹಿಂಸೆ, ನಿಂದನೆಗೆ ಗುರಿಯಾಗಿ ಶಿಕ್ಷಣದಿಂದಲೇ ವಂಚಿತನಾಗಿ ಪ್ರಾಣ ಕಳೆದುಕೊಂಡ ಅಣ್ಣನ ದುರಂತ ಬದುಕು ದಲಿತರಿಂದಲೇ ದಲಿತರ ಮೇಲೆ ನಡೆಯುತ್ತಿದ ದೌರ್ಜನ್ಯಗಳು, ದಲಿತರಲ್ಲಿಯೇ ಕಾಡುತ್ತಿದ್ದ ಮೇಲು-ಕೀಳಿನ ಭಾವನೆ ತಮ್ಮ ಕುಟುಂಬದಲ್ಲಿ ಕಾಡುತ್ತಿದ್ದ ಹಸಿವು, ಬಡತನವನ್ನು ನೀಗಿಸಲು ಲೇಖಕರು ಬಾಲ್ಯದಲ್ಲಿಯೇ ತಂದೆಯೊಂದಿಗೆ ಚಪ್ಪಲಿ ಹೊಲೆದು, ತಮಟೆ ಬಡಿದು, ಹಂದಿಗಳನ್ನು ಸಾಕಿ, ದನಕರುಗಳನ್ನು ಮೇಯಿಸಿ ಸತ್ತದನಗಳ ಚರ್ಮದಿಂದ ಕೃಷಿ ಸಲಕರಣೆ ಮತ್ತು ಚರ್ಮವಾದ್ಯಗಳನ್ನು ಮಾಡಿ ಕುಟುಂಬವನ್ನು ನಿಭಾಯಿಸಿದ ಕಷ್ಟದ ದಿನಗಳನ್ನು ತೆರೆದಿಡುತ್ತಲೆ ಶಿಕ್ಷಣದ ಕಸಿಯಿಂದಲೇ ಪ್ರಬುದ್ಧರಾಗಿ ತಮ್ಮ ಬದುಕನ್ನು ವಿಸ್ತರಿಸಿ ಕೊಳ್ಳುತ್ತಲೇ ಸೃಜನಶೀಲ ಪ್ರತಿಭೆಯಾಗಿ ಬೆಳೆದು ಬಂದ ತುಂಬಾಡಿ ರಾಮಯ್ಯನವರ ಗ್ರಾಮೀಣ ಸೊಗಡಿನ ನಡುವೆಯೇ ಬದುಕನ್ನು

ತೆರೆದಿಡುತ್ತಾ ಸಾಗುವ 'ಮಣೆಗಾರ' ಕೃತಿ ತನ್ನ ವ್ಯಾಪ್ತಿಯೊಳಗೆ ಒಂದು ಸಮುದಾಯದ ದಾಖಲೆಯಾಗಿ ನಿಲ್ಲುತ್ತದೆ.

ಹಾಗೆಯೇ ಆತ್ಮಕಥೆಯ ಎರಡನೇ ಭಾಗದಲ್ಲಿ ತೆರೆದುಕೊಳ್ಳುವ ತುಂಬಾಡಿಯವರ ಶಿಕ್ಷಣದೊಂದಿಗೆ ಮಾಗಿದ ಪ್ರಬುದ್ಧತೆಯ ಅನುಭವಗಳು ಅವಮಾನ, ಬಡತನವನ್ನು ಮೀರಿ ನಿಲ್ಲಲು ಪ್ರಯತ್ನಿಸಿರುವುದನ್ನು ಕಾಣಬಹುದು. ಲೇಖಕರ ಕಾಲೇಜುದಿನಗಳಲ್ಲಿಯೇ ಮೊಳೆಯ ತೊಡಗಿದ ದಲಿತಪ್ರಜ್ಞೆ, ಹೋರಾಟ, ಚಳುವಳಿಯ ಚಿಂತನೆಗಳು, ಚಳುವಳಿಯ ನಾಯಕರುಗಳ ಒಡನಾಟ, ನೌಕರಿ ಹಿಡಿಯುವಲ್ಲಿನ ಅನುಭವಗಳ ಜೊತೆಯಲ್ಲಿ ಸಾಮಾಜಿಕ ಪ್ರಜ್ಞೆ, ಆರ್ಥಿಕಪ್ರಜ್ಞೆ, ರಾಜಕೀಯ ಪ್ರಜ್ಞೆ, ಅವೆಲ್ಲಕ್ಕೂ ಪ್ರೇರಕವಾಗಿ ಶೈಕ್ಷಣಿಕಪ್ರಜ್ಞೆ, ಅನುಭವಗಳ ರೂಪದಲ್ಲಿ ಜಾಗೃತಗೊಂಡಿರುವುದನ್ನು'ಮಣೆಗಾರ' ಆತ್ಮಕಥೆಯೊಳಗಿನ ಎರಡನೆ ಭಾಗದಲ್ಲಿ ನೋಡಬಹುದು.

ತುಂಬಾಡಿ ರಾಮಯ್ಯನವರು ತಮ್ಮ ಆತ್ಮಕಥೆಯಲ್ಲಿ ತಮ್ಮ ಬದುಕಿನಲ್ಲಿ ಕಾಡಿದ ಹಸಿವು, ಬಡತನಕ್ಕಿಂತಲೂ, ಅಸ್ಪೃಶ್ಯತೆ ತಮ್ಮನ್ನು ಹೆಚ್ಚು ಕಾಡಿರುವುದನ್ನು ಆತ್ಮಕಥೆಯಲ್ಲಿ ಮನಗಾಣಿಸುತ್ತರಾದರೂ ಅವರನ್ನು ಅಸ್ಪೃಶ್ಯನೆಂದು ಶೋಷಣೆ ಮಾಡಿದ ಮನಸ್ಸುಗಳೆ ಬದುಕಿನ ಯಶಸ್ಸಿನ ಬೆನ್ನೆಲುಬುಗಳಾಗಿ, ನನ್ನ ಬದುಕಿನ ಬಂಧುಗಳಾಗಿ ಬಂದುಹೋಗಿದ್ದಾರೆಂದು ಉಲ್ಲೇಖಿಸುತ್ತಾರೆ. ತಮಗಾದ ಮನುಷ್ಯ ಸಂಬಂಧದ ಪ್ರೀತಿಯನ್ನುಹೇಳುತ್ತಾ ಸುಮಾರು ಹದಿನೈದು -ಇಪ್ಪತ್ತು ವರ್ಷಗಳ ಹಿಂದಿನ ಮಾತು ಒಂದು ಬೇಸಿಗೆಯ ದಿನ ಕೊರಟಗೆರೆ ಸಂತೆ ಮೈದಾನದಲ್ಲಿ ನಿಂತು ನನ್ನ ಅವ್ವ ಮತ್ತು ತಮ್ಮನ ಮೇಲೆ ಯಾವುದೋ ವಿಷಯಕ್ಕಾಗಿ ರೇಗಾಡುತ್ತಾ ನಿಂತಿದ್ದೆ. ಅಷ್ಟರಲ್ಲಿ ನನ್ನ ಭುಜದ ಮೇಲೆ ಯಾರೋ ಕೈಇಟ್ಟಂತಾಯಿತು. ನೋಡಿದರೆ ನಮ್ಮೂರ ಗೊಲ್ಲರ ಹುಲಿಯಪ್ಪಕೈಯಲ್ಲಿ ಎಳೆನೀರು ಹಿಡಿದು, ನನಗೆ ಕೊಟ್ಟು ಮಿಗುವಷ್ಟು ಮುಗುಳುನಗೆಯನ್ನು ಸೂಸುತ್ತಾ 'ಎಳ್ನೀರು ಕುಡಿಯಪ್ಪ ಬಿಸ್ಲುಸುಡ್ತಾ ಐತೆ' ಎಂದರು.ಕೋಪದಿಂದ ಬುಸುಗುಡುತ್ತಿದ್ದ ನನ್ನನ್ನು ಹುಲಿಯಪ್ಪನವರ ಪ್ರೀತಿ ನನ್ನನ್ನು ಸಮಾಧಾನಿಸಿತು ಅಲ್ಲದೆ ನನ್ನ ಮನಸ್ಸಿನಲ್ಲಿ ಹುಲಿಯಪ್ಪನವರೇ ಕಾಡಲಾರಂಭಿಸಿದರು.

ಹುಲಿಯಪ್ಪ ಜಾತಿಯಲ್ಲಿ ಕಾಡುಗೊಲ್ಲರು ಈ ಕಾಡುಗೊಲ್ಲರು ನಮ್ಮ ಮಣೆಗಾರ ಜಾತಿಯವರನ್ನು ತಮ್ಮ ಮನೆಗಳು ಹತ್ತಿರಸುಳಿದಾಡಲೂ ಆಸ್ಪದ ಕೊಡುತ್ತಿರಲಿಲ್ಲ. ಇಂಥ ಕಟ್ಟುನಿಟ್ಟಿನ ಜಾತಿಯವರಾದ ಹುಲಿಯಪ್ಪನವರಿಗೆ ನನ್ನ ಮೇಲೆ ಇಷ್ಟೊಂದು ಪ್ರೀತಿ ಏಕೆ? ಇವೆಲ್ಲ ನನಗೆ ಇಂದಿಗೂ ಬಗೆಹರಿಯದೆ ಗೌಪ್ಯವಾಗಿಯೇ ಉಳಿದಿವೆ. ಹೀಗೆ ನನ್ನ ಜಾತಿಯವರಲ್ಲದ, ಬಂಧುಗಳಲ್ಲದ ನೂರಾರು ಜನ ಹುಲಿಯಪ್ಪನವರು ನನ್ನ ಬದುಕಿನಲ್ಲಿ ಬಂದು ಹೋಗಿದ್ದಾರೆ.'' ಎಂದು ಬರೆದುಕೊಳ್ಳುವ ತುಂಬಾಡಿಯವರು ದಟ್ಟವಾದ ಮನುಷ್ಯ ಸಂಬಂಧಗಳನ್ನು ಬಯಸುತ್ತಲೇ ತನ್ನನ್ನು ಪ್ರೀತಿಯಿಂದ ಕಂಡ ಸಮಾಜದೆಡೆಗೆ ಕೃತಜ್ಞತೆಯಿಂದ ನೋಡುವ, ತನಗೆ ನೆರವಾದವರನ್ನು ಪ್ರೀತಿಯಿಂದ ಸ್ಮರಿಸುವ, ತನಗಾದ ಹಿಂದೆ, ಅವಮಾನಗಳನ್ನು ನುಂಗಿಕೊಂಡು ಮುಗುಳ ನಗೆಬೀರುವ ಎಂಥಾ ಸಂದರ್ಭದಲ್ಲೂ ಸೌಜನ್ಯ ಮೀರದ 'ಸ್ನೇಹಜೀವಿ' ಯಾಗಿ ಇಡೀ ಆತ್ಮಕಥೆಯಲ್ಲಿ ಹರಿದಾಡಿದ್ದಾರೆ.

ಇಡಿಯಾಗಿ ನೋಡಿದರೆ 'ಮಣೆಗಾರ' ಆತ್ಮಕಥೆ ತುಂಬಾಡಿ ರಾಮಯ್ಯನವರ ಬದುಕಿನ ಆತ್ಮಕಥನ ಮಾತ್ರ ಆಗಿರದೆ, ತನ್ನ ವ್ಯಾಪ್ತಿಯನ್ನು ಸೃಜನಶೀಲವಾಗಿ ಪಸರಿಸಿದ್ದು ಒಂದು ಗ್ರಾಮದ, ಒಂದು ಸಮುದಾಯದ ಆತ್ಮಕಥನವಾಗಿ ಕಾಣಿಸಿಕೊಂಡಿದೆ. ಜಾನಪದೀಯ ನೆಲೆಯಲ್ಲಿ ಗ್ರಾಮೀಣ ಸಮಾಜದ ಬದುಕನ್ನು ಹಿಡಿದಿಟ್ಟಿರುವ ರಾಮಯ್ಯನವರು, ಹಳ್ಳಿಗಳಲ್ಲಿರುವ ಜಾತಿಸಮುದಾಯಗಳು, ಅವುಗಳಲ್ಲಿರುವ ಒಳಪಂಗಡ, ಬೆಡಗುಗಳು, ಅಲ್ಲಿನ ಸಾಂಸ್ಕೃತಿಕ ಆಚರಣೆ, ಧಾರ್ಮಿಕ ನಂಬಿಕೆ, ಸಾಮಾಜಿಕ ಸಂಬಂಧಗಳು, ಜನರ ಪ್ರೀತಿ, ಇವೆಲ್ಲಾ ಕೃತಿಯಲ್ಲಿ ದಟ್ಟವಾಗಿದ್ದು, ನೆಲಸಂಸ್ಕೃತಿಯ ಗ್ರಾಮೀಣ ಸಮಾಜವನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ.

ಕನ್ನಡ ದಲಿತ ಸಾಹಿತ್ಯದ ಪ್ರಮುಖ ಆತ್ಮಕಥೆಗಳೆನಿಸಿಕೊಂಡಿರುವ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ, ಸಿದ್ಧಲಿಂಗಯ್ಯನವರ ಊರು-ಕೇರಿ, ತುಂಬಾಡಿ ರಾಮಯ್ಯನವರ 'ಮಣೆಗಾರ' ಆತ್ಮಕಥೆಗಳಲ್ಲಿನ ಸಾಮ್ಯತೆ, ಭಿನ್ನತೆ, ಅವುಗಳಲ್ಲಿ ಮೂಡಿರುವ ದಲಿತ ಸಮಾಜ ಬದುಕನ್ನು ಅಭಿವ್ಯಕ್ತಿಸಲು ಬಳಕೆಯಾಗಿರುವ ಭಾಷೆ, ನಿರೂಪಣಾ ತಂತ್ರ, ಆತ್ಮಕಥೆಗಳ ಒಡಲಿನಲ್ಲಿ ಇಂಬುಗೊಂಡಿರುವ ವಸ್ತು. ಆಶಯಗಳನ್ನು ಈ ಮೂರು ಆತ್ಮಕಥೆಗಳ ಹಿನ್ನೆಲೆಯಲ್ಲಿ ತೌಲನೀಕರಿಸಿ ನೋಡುವುದು ಬಹಳ ಮುಖ್ಯವೆನಿಸುತ್ತದೆ.

ದಲಿತ ಆತ್ಮಕಥೆಗಳಲ್ಲಿ ಇಂಬುಗೊಂಡಿರುವ ಅವಮಾನ ಮತ್ತು ಸ್ವಾಭಿಮಾನದ ಬದುಕುಗಳೇ ಈ ಆತ್ಮಕಥೆಗಳ ಮುಖ್ಯ ವಸ್ತು ಎನಿಸಿಕೊಳ್ಳುತ್ತವೆ. ಈ ನಿಟ್ಟಿನಲ್ಲಿಯೇ ಪ್ರತಿಯೊಂದು ದಲಿತ ಆತ್ಮಕಥೆಗಳ ಒಡಲಿನಲ್ಲಿ ಅಸ್ಪೃಶ್ಯತೆ ಘೋರ ಅನುಭವ, ಭೀಕರವಾದ ಬಡತನ, ದಾಸ್ಯದ ಬದುಕು ವ್ಯವಸ್ಥೆಯ ಅಟ್ಟಹಾಸ, ಸಾಮಾಜಿಕ ಅಸಮಾನತೆಯ ವಿರುದ್ಧ ದಲಿತರು ನಡೆಸಿದ ಹೋರಾಟಗಳೆ ದಟ್ಟವಾಗಿ ಹರಿದಾಡುತ್ತವೆ. ಹಾಗಾಗಿ ಎಲ್ಲಾ ದಲತ ಆತ್ಮಗಳಲ್ಲಿಯ ವಸ್ತುವಿನಲ್ಲಿ ಸಾಮ್ಯತೆಯ ಗುಣಗಳನ್ನು ಕಾಣಬಹುದು.

ಈ ಮೂರು ಆತ್ಮಕಥೆಗಳ ಒಡಲಿನಲ್ಲಿ ಅಭಿವ್ಯಕ್ತಗೊಂಡಿರುವ ವಸ್ತು, ಆಶಯವನ್ನು ಹುಡುಕುತ್ತಾ ಹೋದರೆ ಇವುಗಳಲ್ಲಿನ ಆತ್ಮಕಥನಗಾರರು ತಮ್ಮ ದಲಿತ ಬದುಕಿನ ನೋವು, ಅವಮಾನ, ಬಡತನವನ್ನು ಏಕರೀತಿಯ।ಲ್ಲಿಯೇ ತೆರೆದಿಡುತ್ತಾರಾದರೂ, ಇಲ್ಲಿನ ಲೇಖಕರು ತಮ್ಮ ಬದುಕಿನ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸಿ ಶಿಕ್ಷಣಪಡೆದು ತಮ್ಮ ಪ್ರಬುದ್ಧ ಬದುಕುಗಳನ್ನು ಕಟ್ಟಿಕೊಂಡರಾದರೂ ಇಡೀದಲಿತ ಸಮುದಾಯದ ಜನರ ಬದುಕಿನ ಪ್ರಬುದ್ಧತೆಯನ್ನು ಕಟ್ಟಿಕೊಡುವಲ್ಲಿ ಈ ಆತ್ಮಕಥೆಗಳು ಸೋಲುತ್ತವೆಯಾದ್ದರಿಂದ ಈ ಆತ್ಮಕಥೆಗಳಲ್ಲಿನ ಮಿತಿಯನ್ನು ಗುರುತಿಸಬಹುದು.

ಈ ಆತ್ಮಕಥೆಗಳಲ್ಲಿನ ಭಿನ್ನತೆಗಳನ್ನು ಹುಡುಕುವುದಾದರೆ ಈ ಮೂರು ಆತ್ಮಕಥನಗಳಲ್ಲಿಯೂ ಅಭಿವ್ಯಕ್ತಗೊಂಡಿರುವ ಕಥನ ಕೌಶಲ್ಯತೆಯಲ್ಲಿ ವಿಶಿಷ್ಟತೆ ಮೆರೆದಿರುವುದನ್ನು ಕಾಣಬಹುದು. ಮುಖ್ಯವಾಗಿ ಅರವಿಂದ ಮಾಲಗತ್ತಿಯವರು ತಮ್ಮ ಗೌರ್ಮೆಂಟ್ ಬ್ರಾಹ್ಮಣ ಆತ್ಮಕಥೆಯ ಪ್ರತಿ ಪ್ರಸಂಗವನ್ನು ಕಟ್ಟಿಕೊಡುವಾಗಲೂ ಪೀಠಿಕೆಯ ರೂಪದಲ್ಲಿ ಪ್ರಾರಂಭಿಸುತ್ತಾ ಮುಕ್ತಾಯದ ಹಂತದಲ್ಲಿ ಪ್ರಶ್ನೆಯ ರೂಪದಲ್ಲಿ ಗಂಭೀರ ಚಿಂತನೆಗೆ ತೊಡಗಿಸುತ್ತಲೇ ಪ್ರಸಂಗಗಳನ್ನು ಮುಗಿಸುತ್ತಾರೆ. ಇಲ್ಲಿನ ಇಪ್ಪತ್ತು ಅಧ್ಯಾಯಗಳಲ್ಲಿಯೂ ವಿಷಯದ ವೈವಿಧ್ಯತೆ ಇದೆ. ಇಲ್ಲಿನ ಸನ್ನಿವೇಶಗಳನ್ನು, ಅನುಭವಗಳನ್ನು ಅದರ ಎಲ್ಲಾ ಸೂಕ್ಷ್ಮಗಳೊಂದಿಗೆ ನಿರೂಪಿಸುವ ಕಥನ ಕೌಶಲ್ಯವಿದೆ. ಈ ಕೌಶಲ್ಯದಿಂದಲೇ 'ಗೌರ್ಮೆಂಟ್ ಬ್ರಾಹ್ಮಣ'ಆತ್ಮಕಥೆ ಮೊದಲ ಆತ್ಮಕಥೆಯಾಗಿ ಯಶಸ್ಸನ್ನು ಸಾಧಿಸಿದೆ.

ಇನ್ನೂ ಊರುಕೇರಿ ಆತ್ಮಕಥೆಯಲ್ಲಿನ ಭಿನ್ನತೆಯನ್ನು ಹುಡುಕುವುದಾದರೆ ಸಿದ್ಧಲಿಂಗಯ್ಯನವರು ತಮ್ಮ ಆತ್ಮಕಥನದಲ್ಲಿ ಆವೇಶವನ್ನು ಬದಿಗಿರಿಸಿ ನೋವು-ವಿಷಾದಗಳೊಂದಿಗೆ ತಮ್ಮ ದಲಿತಕೇರಿಯ ಬದುಕನ್ನು ಬಿಡಿಸಿಟ್ಟಿದ್ದಾರೆ. ಈ ಆತ್ಮಕಥೆಯ ಉದ್ದಕ್ಕೂ ನೋವಿನ ನಡುವೆಯೂ ವಿನೋದ, ವ್ಯಂಗ್ಯ, ವಿಡಂಬನೆಯ ಧಾಟಿ ಇಡೀ ಆತ್ಮಕಥೆಯಲ್ಲಿ ಎದ್ದು ಕಾಣುತ್ತದೆ. ತಿಳಿಹಾಸ್ಯ ಅಲ್ಲಲ್ಲಿ ಹರಿದಾಡುತ್ತದೆ. ಆದರೆ ಆ ನಗುವಿನ ಹಿಂದೆಯೇ ದಲಿತ ಬದುಕಿನ ದಾರುಣತೆ ಮನಸ್ಸನ್ನು ಕದಡುತ್ತಲೇ ವ್ಯವಸ್ಥೆಯ ಚಿಂತನೆಗೆ ನಮ್ಮನ್ನು ತೊಡಗಿಸುತ್ತದೆ.

ಹಾಗೆಯೇ ತುಂಬಾಡಿ ರಾಮಯ್ಯನವರ 'ಮಣೆಗಾರ' ಕೂಡ ತನ್ನ ಕಥನ ಶೈಲಿಯಲ್ಲಿ ಮೇಲಿನ ಎರಡು ಕೃತಿಗಳಿಗೆ ಭಿನ್ನವಾಗಿಯೂ ಸರಿಸಾಟಿಯಾಗಿಯೇ ಕಾಣುತ್ತದೆ. ಮತ್ತು ಸಾಮುದಾಯಿಕ ಅನುಭವಗಳನ್ನು ಹಂಚಿಕೊಳ್ಳುತ್ತಲೇ ಗ್ರಾಮೀಣ ಕಥನವಾಗಿ ಓದುಗರ ಗಮನ ಸೆಳೆಯುತ್ತಲೇ ಯಾವುದನ್ನೂ ವೈಭವೀಕರಿಸದೆ ತಿಳಿಹಾಸ್ಯದ ರೂಪದಲ್ಲಯೇ ತಮ್ಮ ಸಮುದಾಯದ ದಟ್ಟಅನುಭವಗಳನ್ನು ದಾಖಲಿಸುತ್ತಾ ಹೋಗುತ್ತಾರೆ. ಇನ್ನೂ ಅರವಿಂದಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ ಕೃತಿಯನ್ನು ಹೊರತುಪಡಿಸಿದರೆ, ಸಿದ್ಧಲಿಂಗಯ್ಯ, ತುಂಬಾಡಿರಾಮಯ್ಯನವರ ಆತ್ಮಕಥೆಗಳಲ್ಲಿ ದಲಿತ ಹೋರಾಟಗಳು, ಚಳುವಳಿಗಳು, ರಾಜಕಾರಣಿಗಳ ಒಡನಾಟಗಳು ದಾಖಲು ಗೊಂಡಿರುವುದನ್ನು ಕಾಣಬಹುದು.

ಇನ್ನೂ ಯಾವುದೇ ಆತ್ಮಕಥೆಗಳು ಓದುಗರನ್ನು ಹೆಚ್ಚು ಸೆಳೆಯುವಲ್ಲಿ ಆ ಆತ್ಮಕಥೆಗಳಲ್ಲಿ ಅಭಿವ್ಯಕ್ತಿಯ ಮಾಧ್ಯಮವಾಗಿ ಒಡಮೂಡಿರುವ ಭಾಷೆ ಮತ್ತು ಹೇಳಲು ಬಳಸಿರುವ ಲೇಖಕರ ನಿರೂಪಣಾ ತಂತ್ರ ಆತ್ಮಕಥೆಗಳ ಯಶಸ್ಸಿನಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಅಂತೆಯೇ ಗೌರ್ಮೆಂಟ್ ಬ್ರಾಹ್ಮಣ, ಊರು-ಕೇರಿ, ಮಣೆಗಾರ ಆತ್ಮಕಥೆಗಳಲ್ಲಿ ಬಳಸಿರುವ ವೈವಿಧ್ಯತೆಯ ಭಾಷೆ, ನಿರೂಪಣಾತಂತ್ರಗಳು ನಮ್ಮ ಗಮನ ಸೆಳೆಯುತ್ತವೆ.

ಮೂರು ಆತ್ಮಕಥೆಗಳು ಗ್ರಾಮೀಣ ಭಾಷೆಗಳನ್ನೇ ಮೈ ಹೊದ್ದು ಬಂದಿವೆಯಾದರೂ ಭಾಷೆಗಳ ಪ್ರಾದೇಶಿಕ ಹಿನ್ನೆಲೆಯಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಆದರೂ ಮೂರು ಆತ್ಮಕಥೆಗಳ ಒಡಲಿನಲ್ಲಿರುವ ಗ್ರಾಮೀಣ ಸೊಗಡಿನ ಅವ್ಯಾಕರಣ

ಭಾಷೆಯು ಹರಿದಾಡಿರುವುದು ಈ ಆತ್ಮಕಥೆಗಳ ವೈಶಿಷ್ಟ್ಯವೆನಿಸುತ್ತದೆ. ನಿರೂಪಣೆಯಲ್ಲಿ ಪ್ರತಿಮೆಗಳ ರೂಪದ ಕಥನ ಕೌಶಲ್ಯತೆ ಮೂರು ಆತ್ಮಕಥೆಗಳಲ್ಲಿ ಮನೆಮಾಡಿರುವುದನ್ನು ಕಾಣಬಹುದು. ಲೇಖಕರ ಸಾಮಾಜಿಕ ಪರಿವರ್ತನೆಯ ಆಶಯವಾದ ಬರಹದಲ್ಲಿ ಸಾಮಾಜಿಕ ಇರುವಿಕೆಯನ್ನು ಬಿಚ್ಚಿಟ್ಟು ತಣ್ಣಗೆ ಪ್ರಶ್ನಿಸುವ ನಿರೂಪಣಾ ತಂತ್ರ ಈ ಮೂರು ಆತ್ಮಕಥೆಗಳಲ್ಲಿ ಹೆಣೆದುಕೊಂಡಿರುವುದನ್ನು ಗುರುತಿಸಬಹುದು.

ಅರವಿಂದ ಮಾಲಗತ್ತಿಯವರು ತಮ್ಮ ಬದುಕಿನ ದಟ್ಟ ಅನುಭವಗಳನ್ನು ತಮ್ಮ ನೋವು, ಹತಾಶೆಯ ನಡುವೆಯೂ ಯಾವುದೇ ಉತ್ಕಟತೆ ಇಲ್ಲದೆ, ತಮ್ಮ ಅನುಭವಗಳನ್ನು ಸಂಯಮದಿಂದಲೇ, ನಿರೂಪಿಸುತ್ತಾರೆ. ಅಂತೆಯೇ ಸಿದ್ಧಲಿಂಗಯ್ಯ, ತುಂಬಾಡಿ ರಾಮಯ್ಯನವರು ತಮ್ಮ ದಲಿತ ಬದುಕಿನ ನೋವು, ಹಿಂಸೆಯನ್ನು ಮೌನದ ಆಳದಲ್ಲಿ ಹಿಡಿದಿಡುತ್ತಲೇ ತಮ್ಮ ಅನುಭವಗಳಿಗೆ ಹಾಸ್ಯದ ಲೇಪನ ಬೆರಸಿ ನಿರ್ಭಿಡತೆಯಿಂದ ನಿರೂಪಿಸಿರುವುದು ಈ ಮೂರು ಕೃತಿಗಳಲ್ಲಿನ ವೈಶಿಷ್ಟ್ಯ ಅಭಿವ್ಯಕ್ತಿಯ ಮೆರುಗನ್ನು ಹೆಚ್ಚಿಸುವಲ್ಲಿ ಯಶಸ್ವಿಯಾಗಿವೆ. ಭಾಷೆಯ ಬಳಕೆಯ ಮುಖ್ಯತೆಯನ್ನು ಈ ಮೂರು ಕೃತಿಗಳಲ್ಲಿ ಕಾಣುವುದಾದರೆ ಅರವಿಂದ ಮಾಲಗತ್ತಿಯವರು ತಮ್ಮ ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯಲ್ಲಿ ಉತ್ತರಕರ್ನಾಟಕದ ಅದರಲ್ಲೂ ಪ್ರಾದೇಶಿಕವಾಗಿ ವಿಜಾಪುರ ಜಿಲ್ಲೆಯಗ್ರಾಮ್ಯ ಭಾಷೆಯಲ್ಲಿ ತಮ್ಮ ಅನುಭವಗಳನ್ನು ಹಿಡಿದಿಟ್ಟಿರುವುದನ್ನು ಈ ಕೆಳಗಿನ ಪ್ರಸಂಗಗಳಿಂದಲೇ ಗ್ರಹಿಸಬಹುದು.

'ಸೂಳೆ ಮಗನ ಕುಂಡೆಂದರ ತಬಲಾ ಆಗ್ಯಾವ ನೋಡ
ಸಾಲಿ ಉಪ್ಪಿಟ್ಟುತಿಂದು ತಿಂದು......

ಅಂತೆಯೇ ಉತ್ತರಕರ್ನಾಟಕದ ಗ್ರಾಮ್ಯಭಾಷೆ ಗೌರ್ಮೆಂಟ್ ಬ್ರಾಹ್ಮಣದ ಒಳಗೆ ಹರಿದಾಡಿ ವಿಶೇಷಿಕರಿಸಿರುವುದನ್ನು ಕಾಣಬಹುದು.

ಹಾಗೆಯೇ ಊರುಕೇರಿಯ ಭಾಷೆಯ ಭಿನ್ನವಾಗಿದ್ದು ಸಿದ್ಧಲಿಂಗಯ್ಯನವರು ದಕ್ಷಿಣ ಕರ್ನಾಟಕದ ಅದರಲ್ಲೂ ಬೆಂಗಳೂರು ಗ್ರಾಮಾಂತರ ಭಾಷೆಯನ್ನು ತಮ್ಮ ಆತ್ಮಕಥೆಯಲ್ಲಿ ಹರಿಯಬಿಟ್ಟಿರುವುದನ್ನು ಕಾಣಬಹುದು.

''ನಾವ್ಯಾರೂ ಪೋಲಿಸ್ ಸ್ಟೇಷನ್ ಮೆಟ್ಟಿಲು ಹತ್ತಿದೋರಲ್ಲ ನಿಮ್ಮಪ್ಪ ಈಗಾ ಹೋಗ್ತಾನಲ್ಲಪ್ಪ'' ಇಂತಹ ಸಂಭಾಷಣೆಯ ಪದಗಳು ಗ್ರಾಮ್ಯೀಕರಿಸಿ ಕೃತಿಯಲ್ಲಿ ಇಂಬುಗೊಂಡಿರುವುದನ್ನು ಅರಿಯಬಹುದು.

ಅಂತೆಯೇ ತುಂಬಾಡಿ ರಾಮಯ್ಯನವರು ತಮ್ಮ 'ಮಣೆಗಾರ' ಆತ್ಮಕಥೆಯೊಳಗೆ ತಮ್ಮ ತುಮಕೂರು ಜಿಲ್ಲೆಯ ಪ್ರಾದೇಶಿಕ ಗ್ರಾಮ್ಯ ಭಾಷೆಯ ಸ್ವಾಧವನ್ನು ಬೆರೆಸಿರುವುದನ್ನು ಕಾಣಬಹುದು.

''ತಿಂಬಾ ಹಿಟ್ಟಿಲ್ಲಾ ಈ
ಹೇನು-ಕೂರೆಗಳಿಗೇ ಆಗ್ತೈತಿ'

ಒಟ್ಟಾರೆ ಈ ಮೂರೂ ಆತ್ಮಕಥೆಗಳ ಭಾಷೆಗಳು ಪ್ರಾದೇಶಿಕವಾಗಿ ಭಿನ್ನವಾಗುತ್ತವೆಯಾದರೂ ಈ ಮೂರು ಆತ್ಮಕಥೆಗಳಲ್ಲಿ ಇಂಬುಗೊಂಡಿರುವ ಗ್ರಾಮ್ಯಬದುಕಿನ ಪಸಿ ಈ ಆತ್ಮಕಥೆಗಳ ಬದುಕಿನ ಒಡಲಿನ ದನಿಯನ್ನು ಸಾಮ್ಯೀಕರಿಸುತ್ತವೆ.

ಒಟ್ಟಾರೆ ಮರಾಠಿ ದಲಿತ ಆತ್ಮಕಥೆಗಳ ಪ್ರೇರಣೆಯಿಂದ ಕನ್ನಡದಲ್ಲಿ ಮೈದಾಳಿದ ದಲಿತ ಆತ್ಮಕಥೆಗಳನ್ನು, ಮರಾಠಿ ದಲಿತ ಆತ್ಮಕಥೆಗಳಿಗೆ ಹೋಲಿಸಿ ನೋಡಿದರೆ, ಕನ್ನಡ ದಲಿತ ಆತ್ಮಕಥೆಗಳಲ್ಲಿನ ಕಂಪನದ ಗುಣ ಕಡಿಮೆಯೆಂದೇ ಹೇಳಬೇಕು. ಏಕೆಂದರೆ ಮರಾಠಿ ದಲಿತ ಆತ್ಮಕಥೆಗಳ ಅನುಭವ ಲೋಕ ಹುಟ್ಟಿಸುವಷ್ಟು ನಡುಕವನ್ನು ಕನ್ನಡ ಆತ್ಮಕಥೆಗಳು ಹುಟ್ಟಿಸಲಾರವು. ಆದರೆ ದಲಿತ ಸಮುದಾಯದ ಅಸ್ಪೃಶ್ಯತೆ ನೋವು, ಬಡತನ, ಸ್ವಾಭಿಮಾನದ ಬದುಕನ್ನು ಕಟ್ಟಿಕೊಡುವಲ್ಲಿ ಕನ್ನಡ ದಲಿತ ಆತ್ಮಕಥೆಗಳು ಯಶಸ್ವಿಯಾಗಿವೆ. ಅಲ್ಲದೆ ಈ ಸಮಾಜವನ್ನು ಅಸಮಾನತೆಯಿಂದ ಸಮಾನತೆಯ ಎಡೆಗೆ ತುಡಿವ ಅಂತಃಕರಣದ ಶಕ್ತಿಗಳಾಗಿ ದಲಿತ ಆತ್ಮಕಥೆಗಳು ದಾಖಲುಗೊಂಡಿರುವುದನ್ನು ಕಾಣಬಹುದು.

ಅಡಿಟಿಪ್ಪಣಿಗಳು


೧. ಗೌರ್ಮೆಂಟ್ ಬ್ರಾಹ್ಮಣ : ಅರವಿಂದ ಮಾಲಗತ್ತಿ, ಅಭಿರುಚಿ ಪ್ರಕಾಶನ, ಮೈಸೂರು

೨. ಊರು-ಕೇರಿ, ಡಾ.ಸಿದ್ಧಲಿಂಗಯ್ಯ, ಅಂಕಿತ ಪ್ರಕಾಶನ, ಬೆಂಗಳೂರು

೩. ಮಣೆಗಾರ, ತುಂಬಾಡಿ ರಾಮಯ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ

೪. ಕನ್ನಡ ದಲಿತ ಸಾಹಿತ್ಯ, ಸಂ. ಡಾ. ಅ ರ್ಜುನಗೊಳಸಂಗಿ

೫. ದಲಿತಮಾರ್ಗ, ಡಾ. ಅರವಿಂದ ಮಾಲಗತ್ತಿ

೬. ಬಡುವರ ನಗುವಿನ ಶಕ್ತಿ, ಸಂ. ಎಚ್ ದಂಡಪ್ಪ

೭. ಮಾರ್ಗಸಾಹಿತ್ಯ, ಡಾ.ಕೆ. ಕೇಶವಶರ್ಮಾ, ಅಭಿರುಚಿ ಪ್ರಕಾಶನ, ಮೈಸೂರು

೮. ಕನ್ನಡ ವಿಶ್ವಕೋಶ, ಸಂ. ಡಾ. ಅರವಿಂದ ಮಾಲಗತ್ತಿ, ಮೈಸೂರು ವಿ.ವಿ. (ಪ್ರಸಾರಾಂಗ), ಪುಟ-೨೭೪-೨೭೭

# ಅಧ್ಯಾಯ - ೪

## ದಲಿತ ಆತ್ಮಕಥೆಗಳಲ್ಲಿ ಅಭಿವ್ಯಕ್ತಗೊಂಡಿರುವ ಬಾಲ್ಯದ ಚಿತ್ರಣಗಳು

ಪ್ರತಿಯೊಬ್ಬ ಮನುಷ್ಯನ ಬದುಕಿನಲ್ಲೂ ' ಬಾಲ್ಯ ' ಎಂಬುದು ಮರೆಯಲಾಗದ ವಸಂತಕಾಲ . ಹಾಗಾಗಿ ಎಲ್ಲಾ ಆತ್ಮಕಥೆಗಳಲ್ಲಿಯು ಬಾಲ್ಯದ ಅನುಭವಗಳೆ ಹೆಚ್ಚಾಗಿ ಗನಿಕರಿಸುವುದನ್ನು ಕಾಣಬಹುದು. ಹಾಗಾಗಿ ನಮ್ಮ ಕವಿ. ಕಲಾವಿದರ ಬದುಕಿಗೆ ಬಂದರೆ ಬಾಲ್ಯ ಹೆಚ್ಚು ಸೊಗಸನ್ನು ಈಯುತ್ತದೆ. ಏಕೆಂದರೆ ಯಾವುದೇ ವ್ಯಕ್ತಿ ತಾನು ಮೊದಲು ಅನುಭವಿಸುವ ಹಂತವೇ ಬಾಲ್ಯ. ಆ ನಂತರ ಯೌವ್ವನ ಮತ್ತು ಮುಪ್ಪು ಇವು ವ್ಯಕ್ತಿಯ ಬದುಕಿನ ಮೂರು ವಸಂತಗಳು ಅವುಗಳಲ್ಲಿ ಬಾಲ್ಯದ ವಸಂತವೇ ತುಂಬಾ ಕಾಡುತ್ತದೆ. ಅಲ್ಲದೆ ಬದುಕಿಗೆ ಮುನ್ನುಡಿಯಾಗಿ ಮುಂದಿನ ಬದುಕಿಗೆ ದಾರಿದೀಪವಾಗುತ್ತದೆ.

ಯಾವುದೇ ವ್ಯಕ್ತಿ ತಾನು ಬಾಲ್ಯದಲ್ಲಿ ಕಂಡೂಂಡ ಸಿಹಿ ಅಥವಾ ಕಹಿ ಅನುಭವಗಳಿರಬಹುದು ಅಥವಾ ಯಾತನಾಮಯವಾದ ಬದುಕಿರಬಹುದು ಇವೆಲ್ಲವೂ ಭವಿಷ್ಯದ ಬದುಕಿಗೆ ಮುಂಬೆಳಕಾಗುವ ಲಕ್ಷಣಗಳಾಗಿ ಗೋಚರಿಸುತ್ತವೆ. ಹಾಗಾಗಿಯೇ ಯವೊಬ್ಬ ವ್ಯಕ್ತಿಯ ಬದುಕನ್ನು ಹೊಕ್ಕರು ಆ ವ್ಯಕ್ತಿಯಲ್ಲಿ ಬಾಲ್ಯ ದ ನೋವು -ನಲಿವಿನ ಅನುಭವಗಳು ಮೇಳೈಸಿ ನಿಲ್ಲುವುದನ್ನು ಕಾಣಬಹುದು. ಏಕೆಂದರೆ ಯೌವನ ಮುಪ್ಪಿಗಿಂತಲೂ ಬಾಲ್ಯ ದ ಆ ದಿನಗಳು ಹೆಚ್ಚು ಸಂತೋಷ ನೀಡುವುದರ ಜೊತೆಗೆ ಆಗಿನ ಮುಗ್ಧತೆ. ತುಂಟತನ ಕೀಟಲೆ, ಆಟ-ಪಾಠಗಳು ಹೆಚ್ಚು ನೆನಪಿನ ಸವಿ ಎನಿಸುತ್ತವೆ.

ಈ ನೆನಪಿನ ಸವಿಯನ್ನು ಮತ್ತೊಬ್ಬರು ಒಡನಾಡಿಯಾಗಿ ಹಂಚಿ ಕೊಂಡಾಗ ಮತ್ತಷ್ಟು ಆನಂದ ರಸವನ್ನು ಉಕ್ಕಿಸುವ ಸಾಧ್ಯತೆಯನ್ನು ಪಡೆಯುತ್ತವೆ. ಆದ್ದರಿಂದಲೇ ಬಾಲ್ಯ ವಿಲ್ಲದ ವ್ಯಕ್ತಿಯಿಲ್ಲ ಹಾಗಾಗಿ ಬಾಲ್ಯ ಅನುಭವಗಳು ಅಚ್ಚಾದರೇನೆ ಅವನು ವ್ಯಕ್ತಿಯ ಮೂರ್ತರೂಪ ಪಡೆಯಲು ಸಾಧ್ಯ ಜೊತೆಗೆ ಆ ಬಾಲ್ಯದ ಅನುಭವದ ಗಣಿಗಳು ಆತನ ಮುಂದಿನ ವ್ಯಕ್ತಿತ್ವವನ್ನು ಬದಲಿಸಲು ಅನುವು ಮಾಡಿಕೊಡುತ್ತವೆ.

ಈ ಹಿನ್ನಲೆಯಲ್ಲಿ ನಮ್ಮ ಕವಿಗಳು , ಕಲಾವಿದರು. ಆತ್ಮಚರಿತ್ರೆ, ಆತ್ಮಕಥೆಗಳು ಮತ್ತು ಜೀವನ ಚರಿತ್ರೆಯ ರೂಪದಲ್ಲಿ ತಮ್ಮ ಬಾಲ್ಯದ ಅನುಭವಗಳನ್ನು ಒಡಮೂಡಿಸಲು ಪ್ರಯತ್ನಿಸಿದ್ದಾರೆ ಪ್ರಯತ್ನದಲ್ಲಿ ಕನ್ನಡ ಸಾಹಿತ್ಯದ ಕವಿಗಳು. ಸಾಹಿತ್ಯ ಪಂಥಗೋಳಪಾದಿಪಾಂಬಲ್ಲಿ ತಮ್ಮ ಬಾಲ್ಯದಿಂದ ಹಿಡಿದು ಮುಪ್ಪಿನದಿನಗಳವರೆಗೂ ಸವೆದ ಬದುಕಿನ ಪುಟಗಳನ್ನು ಆತ್ಮಕಥೆಗಳ ರೂಪದಲ್ಲಿ ಸಮಾಜದ ಮುಂದೆ ತೆರೆದಿಟ್ಟು ಯಶಸ್ವಿಯಾಗಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಅತ್ಮಕಥೆಗಳು ಮುಖ್ಯವಾಗಿ ಕಾಣಿಸಿ ಕೊಳ್ಳುವುದು ನವೋದಯ ಸಾಹಿತ್ಯವನ್ನು ಬಿಟ್ಟರೆ, ದಲಿತ ಬಂಡಾಯ ಸಹಿತ್ಯ ಕಾಲಘಟ್ಟದಲ್ಲಿಯೆ ನವೋದಯ ಸಾಹಿತ್ಯಕ್ಕೆ ಬಂದರೆ ಮಾಸ್ತಿ ಭಾವ ಶಿವರಾಮಕಾರಂತರು . ಹುಚ್ಚು ಮನಸ್ಸಿನ ಹತ್ತು ಮುಖಗಳು. ಕುಂವೆಪು ನೆನಪಿನ ದೋಣಿಯಲ್ಲಿ ಎ.ಎನ್. ಮೂರ್ತಿರಾಯರ ಸಂಜೇಗಣ್ಣಿನ ಹಿನ್ನೋಟ. ಹೀಗೆ ವಿಭಿನ್ನ ತಲೆಬರಹಗಳಿಂದ ತಮ್ಮ ಬದುಕನ್ನು ದಾಖಲೀಕರಿಸಿದ್ದಾರೆ ಅಲ್ಲದೆ ಎಲ್ಲಾ ಆತ್ಮಕಥೆಗಳ ಒಳಹೊಕ್ಕರು ಅವರ ಆತ್ಮಕಥೆಯ ಪುಟಗಳು ಬಾಲ್ಯದ ಬದುಕನ್ನೆ ಹೆಚ್ಚು ಆವರಿಸಿ ಹರಿದಾಡಿರುವುದನ್ನು ಮನಗಾಣಬಹುದಾದರೂ ದಲಿತ ಲೇಖಕರು ಬಾಲ್ಯದ ದಿನಗಳಲ್ಲಿ ಕಾಡಿರುವ ಹಸಿವು, ನೋವು ಅಪಮಾನಗಳು ದಲೆತೇತರ ಆತ್ಮಕಥೆಗಳಲ್ಲಿ ಕಾಣಸಿಗುವುದಿಲ್ಲಾ ಎಂಬುದನ್ನು ಮನಗಾಣಬೇಕು.

ಆದರೂ ದಲಿತೇತರ ಆತ್ಮಕಥೆಗಳಲ್ಲಿ ತೆರೆದು ಕೊಂಡಿರುವ ಬಾಲ್ಯ ದ ದಿನಗಳಲ್ಲಿ ಹಸಿವು , ಬಡತನ ಬದುಕಿನ ಹೋರಾಟದ ಅನುಭವಗಳು ದಾಖಲಾಗಿಲ್ಲ ಎಂದರೆ ತಪ್ಪಾಗುತ್ತದೆ. ಉದಾಹರಣೆಗೆ:-ದೇ ಜವರೇಗೌಡರು ತಮ್ಮ ಹೋರಾಟದ ಬದುಕಿನ ಪುಟಗಳಲ್ಲಿ ತಾವು ಹಳ್ಳಿಗಾಡಿನಲ್ಲಿ ಹುಟ್ಟಿ ಹಸಿವು ಬಡತನದ ನಡುವೆಯೂ ಶಿಕ್ಷಣಕ್ಕಾಗಿ ನೆಡೆಸಿದ ಬಾಲ್ಯದ ಹೋರಾಟದ ಬದುಕನ್ನು ತೆರೆದಿಡುತ್ತಾರೆ. ಹಾಗೆಯೇ ಶಿವರಾಮ ಕಾರಂತರು ತಮ್ಮ ಹುಚ್ಚು ಮನಸ್ಸಿನ ಹತ್ತು ಮುಖಗಳು' ಆಯ್ಮಕಥೆಯಲ್ಲಿ ತಾವು ಬಾಲ್ಯದ ದಿನಗಳಲ್ಲಿಯೇ ಬದುಕಿಗೆ ಗುರುವಿಲ್ಲದೆ ಗುರಿಯಿಲ್ಲದೆ ಕಷ್ಟ-ಕಾರ್ಪಣ್ಯಗಳ ನಡುವೆ ದಿಕ್ಕು ತಪ್ಪತ್ತ ಲೇಖಕರಾಗಿ ಬೆಳೆದುಬಂದ ಪರಿಯನ್ನು ತಮ್ಮ ಆತ್ಮಕಥೆಗಳಲ್ಲಿ ಕಟ್ಟಿ ಕೊಡುತ್ತಾರೆ. ಈ ನಿಟ್ಟಿನಲ್ಲಿ ನೋಡುವುದಾದರೆ ದಲಿತೇತರ

ಕವಿಗಳಿಗೆ ಬಡತನ ಕಾಡಿರಬಹುದು ಆದರೆ ಹಿಂಸೆ ಅಪಮಾನ, ಅಸ್ಪೃಶ್ಯತೆ. ಯಂತಹ ಅಮಾನವೀಯ ದಾಳಿಗಳು ಬಾಲ್ಯದ ಅನುಭವಗಳಿಂದಲೆ ತಿಳಿಯಬಹುದು.

ಈ ಹಿನ್ನಲೆಯಲ್ಲಿ ನೋಡುವುದಾದರೆ ದಲಿತ ಆತ್ಮಕಥೆಗಳಲ್ಲಿ ದಾಖಲಾಗಿರುವ ಬಾಲ್ಯದ ಹಸಿವು ನೋವು ಅಪಮಾನ ಅಸ್ಪ್ರಶ್ಯತೆ ಹಿಂಸೆಯಂತಹ ಅಮಾನವೀಯ ಅನುಭವದ ಕ್ರೋರ ಚಿತ್ರಣಗಳು ಓದುಗನ ಮುಂದೆ ಹೆಚ್ಚು ಮಹತ್ವವನ್ನು ಪಡೆಯುತ್ತವೆ, ಹಾಗಾಗಿ ಇತರ ಆತ್ಮಕಥೆಗಳ ಬಾಲ್ಯದ ಚಿತ್ರಣಕ್ಕೂ ದಲಿತ ಆತ್ಮಕಥೆಗಳಲ್ಲಿ ಕಾಣುವ ಬಾಲ್ಯದ ಚಿತ್ರಣಕ್ಕೂ ತುಂಬಾ ಅಂತರ ಹಾಗೂ ವ್ಯತ್ಯಾಸವಿರುವುದನ್ನು ಕಾಣಬಹುದು ಈ ನೆಲೆಯಲ್ಲಿಯೇ ದಲಿತ ಆತ್ಮಕಥೆಗಳು ಈ ಸಮಾಜವನ್ನು ಹೆಚ್ಚು ಕಾಡುವಂಥ ಪ್ರಕ್ರಿಯೆಯನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದನ್ನು ಗುರುತಿಸಬಹದು.

ಮುಖ್ಯವಾಗಿ ಮರಾಠಿದಲಿತ ಆತ್ಮಕಥೆಗಳಿಂದ ಪ್ರೇರಣೆಗೊಂಡು ಕನ್ನಡದಲ್ಲಿ ಬರಸಿಕೊಂಡು ದಲಿತ ಆತ್ಮಕಥೆಗಳು ಮರಾಠಿದಲಿತ ಆತ್ಮಕಥೆಗಳಷ್ಟು ಪ್ರಭಾವಿ ಎನಿಸಿದಿದ್ದರೂ ಕನ್ನಡದ ಪರಿಸರಕ್ಕೆ ದಲಿತ ಆತ್ಮಕಥೆಗಳು ಸಾಕಷ್ಟು ಪ್ರಭೆಯನ್ನು ಮೂಡಿಸಲು ಕಾರಣವಾಗಿವೆ.

ನನ್ನ ಈ ಪ್ರಬಂಧದ ಮೂಲ ಉದ್ದೇಶ ದಲಿತ ಆತ್ಮಕಥೆಗಳಲ್ಲಿ ಬಾಲ್ಯದ ಚಿತ್ರಣ ಎಂಬ ಮುಖ್ಯನೆಲೆಯಲ್ಲಿ ನೆಡೆಯುತ್ತಿರುವುದರಿಂದ ನನ್ನ ಒತ್ತು ವಿವೇಚನೆ ಹಾಗೂ ವಿಮರ್ಶೆಯೂ ಈ ಅಧ್ಯಾಯದ ಮೇಲೆ ಹೆಚ್ಚು ಕೇಂದ್ರಿಕರಿಸುತ್ತದೆ.

ಈ ನಿಟ್ಟಿನಲ್ಲಿ ಅರವಿಂದ ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ ಸಿದ್ಧಲಿಂಗಯ್ಯನವರ ಊರು ಕೇರಿ ತುಂಬಾಡಿರಾಮಯ್ಯನವರ ಮಣೆಗಾರ ಈ ಮೂರು ಪ್ರಮುಖ ದಲಿತ ಆತ್ಮಕಥೆಗಳಲ್ಲಿ ಮೂಡಿರುವ ಬಾಲ್ಯ ದ ಚಿತ್ರಣವನ್ನು ಗ್ರಹಿಸಲು ಪ್ರಯತ್ನಿಸಿದ್ದೇನೆ ಅಲ್ಲದೆ ಮುಖ್ಯವಾಗಿ ಈ ಆತ್ಮಕಥೆಗಳ ಒಳಹೊಕ್ಕು ಲೇಖಕರ ಬಾಲ್ಯದ ದಿನಗಳಲ್ಲಿನ ಸಾಮಾಜಿಕ ಸ್ಥಿತಿ, ಶೈಕ್ಷಣಿಕಸ್ಥಿತಿ ಹಾಗೂ ಧಾರ್ಮಿಕ ಸ್ಥಿತಿಯನ್ನು ವಿವೇಚಿಸಿ ನೋಡಲು ಪ್ರಯತ್ನಿಸಿದ್ದೇನೆ.

**ಗೌರ್ಮೆಂಟ್ ಬ್ರಾಹ್ಮಣ ಆತ್ಮಕಥೆಯಲ್ಲಿ ಬಾಲ್ಯ:-**

ಈ ಅತ್ಮಕಥೆಯಲ್ಲಿನ ಬಾಲ್ಯ ದ ಸ್ಥಿತಿಗತಿಗಳನ್ನು ಹೆಕ್ಕಿ ತೆಗೆಯುವ ಮೊದಲು ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ ಆತ್ಮಕಥೆಯ ಹಿಂದಿರುವ ಮುಖ್ಯ ಸಂಗತಿಗಳೇನು? ಕಾಳಾಜಿ ಏನು? ಮತ್ತು ಈ ಸಂಗತಿಗಳನ್ನು ಅವರ ಬರಹದ ರೂಪ ಹೀಗೆ ರೂಪಿಸಿಕೊಂಡಿದೆ. ಎಂಬುವುದನ್ನು ಮುಖ್ಯವಾಗಿ ಗಮನಿಸಿಸುವುದು ಅವಶ್ಯಕ. ಸ್ಥಿತ್ಯಂತರಗೊಳ್ಳುತ್ತಿರುವ ಸಾಮಾಜಿಕ ವಾಸ್ತವದ ಹಿನ್ನೆಲೆಯಲ್ಲಿ ದಲಿತತ್ವದ ಕೇಂದ್ರವೇನು ಅದರ ಸ್ವರೂಪವೇನು? ಇವೆಲ್ಲವನ್ನು ಗೌರ್ಮೆಂಟ್ ಬ್ರಾಹ್ಮಣ ಆತ್ಮಕಥೆ ಎತ್ತಿಕೊಳ್ಳುತ್ತದೆ. ದಲಿತ ವೆನ್ನುವ ಸಾಂಸ್ಕೃತಿಕ ವಾಸ್ತವದ ಸಮಸ್ಯೆಯನ್ನು ನೋಡುವಾಗ ಅದನ್ನು ಬೇರೆ ಬೇರೆ ಪರಿಗಳ ಮುಖೀನ ನೋಡುವುದು ಸಾಧ್ಯ ಹಾಗೆಯೇ ಇದನ್ನು ರಾಜಕೀಯ ಪರಿಭಾಷೆಯ ಮೂಲಕ ನೋಡಬಹುದು. ಶ್ರೇಣಿ ಕೃತ ಸಮಾಜಿಕ ವ್ಯವಸ್ಥೆಯ ಹಿನ್ನಲೆಯಲ್ಲಿ ನೋಡಬಹುದು. ಅಥವಾ ಅದನ್ನು ಒಂದು ಸಾಮಾಜಿಕ ವರ್ಗವಾಗಿಯೂ ಪರಿಶೀಲಿಸ ಬಹುದಾದ ಸಾಧ್ಯತೆಯು ಇದೆ.

ಈ ಹಿನ್ನಲೆಯಲ್ಲಿ ನೋಡುವುದಾದರೆ ಅರವಿಂದ ಮಾಲಗತ್ತಿಯವರು ದಲಿತ ಲೇಖಕರಾಗಿ ಸಮಾಜದ ಬದಲಾವಣೆಯನ್ನು ಬಯಸುವ ಉತ್ಕಟ ಇಚ್ಛೆ ಉಳ್ಳವರು ಆ ಕಾರಣಾಕ್ಕಾಗಿಯೇ ಅವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯು ಈ ವ್ಯವಸ್ಥೆಯ ಸಾಮಾಜಿಕ ಶೈಕ್ಷಣಿಕ ಆರ್ಥಿಕ ತಳಮಳಗಳನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸುತ್ತದೆ.

ಈ ಆತ್ಮಕಥೆಯನ್ನು ವಾಸ್ತವದ ನೆಲೆಯಲ್ಲಿ ನೋಡಿದಾಗ ಮಾಲಗತ್ತಿಯವರು ತಮ್ಮ ಬಾಲ್ಯದಲ್ಲಿ ಅನುಭವಿಸಿದ ಯಾತನಾಮಯ ಬದುಕನ್ನು ನಿರ್ಭಿಡತೆಯಿಂದ ಹೇಳಿಕೊಂಡಿದ್ದಾರೆ ಅದರಲ್ಲೂ ಅವರ ಬಾಲ್ಯದ ಬದುಕಿನ ಸಂಬಂಧದ ಹೆಣಿಕೆಗಳು ತಲ್ಲಣಗಳ ನಡುವೆಯು ಮಧುರವಾಗಿಯೇ ಬೆಸುಗೆ ಹಾಕಿಕೊಂಡಿವೆ ಈ ಹಿನ್ನಲೆಯಲ್ಲಿಯೇ ವಿಮರ್ಶಕರಾದ ಡಾ. ರಹಮತ್ ತರಿಕೇರಿಯವರು " ಈ ಆತ್ಮಕಥನದಲ್ಲಿ ಲೇಖಕರ ಪ್ರಾಯದ ಕಾಲದವರೆಗಿನ ಅನುಭವಗಳು ಮಾತ್ರ ದಾಖಲಾಗಿವೆ ಅದರಲ್ಲೂ ಬಾಲ್ಯ ದ ದಿನಗಳ ಶಾಲೆ ಕಾಲೇಜು ಕಲಿವಾಗಿನ ದಿನಗಳು ಅನುಭವಗಳು ಹೆಚ್ಚು ಹರಿದಾಡುತ್ತವೆ. (ದಲಿತಮಾರ್ಗ: ಪುಟ 391) ಎಂದಿದ್ದಾರೆ ಈ ಹಿನ್ನಲೆಯಲ್ಲಿ ಚರ್ಚಿಸುವಾಗ

ಲೇಖಕರ ಬಾಲ್ಯ ಶಿಕ್ಷಣ. ಸಾಮಾಜಿಕ ಮತ್ತು ಆರ್ಥಿಕ ಬದುಕುಗಳು ಹೆಚ್ಚು ಮೌಲ್ಯಯುಕ್ತವಾಗಿ ತೋರುತ್ತವೆ.

ಅರವಿಂದ ಮಾಲಗತ್ತಿಯವರು ತಮ್ಮ ಆತ್ಮಕಥೆಯ ಆರಂಭದಲ್ಲಿಯೇ ಆತ್ಮಕಥೆ ಬರೆಯುವುದು ನನ್ನ ಚಿಕ್ಕ ವಯಸ್ಸಿಗೆ ಬೇಕೆ ಎನ್ನುವ ಪ್ರಶ್ನೆ ನನ್ನನ್ನು ಕಾಡಿದೆ ಏಕೆಂದರೆ ಕನ್ನಡ ಸಾಹಿತ್ಯದಲ್ಲಿ ಆತ್ಮಕಥೆ ಬರೆಯುವುದು ಸಾಮಾನ್ಯವಾಗಿ ಕೂದಲು ನರೆತು ತಲೆ ಅಲುಗಾಡುವಾಗ ಅನುಭವಗಳನ್ನು ಹೇಳಿಕೊಳ್ಳಲು ಕೂದಲು ನರೆಯಬೆಕಾಗಿಲ್ಲ. ಬಾಯೊಳಗಿನ ಹಲ್ಲುಗಲು ಉದುರಬೇಕಿಲ್ಲ. ಬದುಕಿನ ವಾಸ್ತವದ ಸಂಗತಿಗಳನ್ನು ಯಥಾವತ್ತಾಗಿ ಕೊಡುವುದೆಂದರೆ ಬದುಕಿರುವಾಗಲೇ ಜನತೆಯ ಬಾಯಿಗೆ ಎಲೆ ಅಡಿಕೆಯಾಗುವುದು ಎಂದರ್ಥ" ( ಗೌರ್ಮೆಂಟ್ ಬ್ರಾಹ್ಮಣ : ಪುಟ 2).

ಲೇಖಕರ ಈ ಮೇಲಿನ ಮಾತುಗಳಲ್ಲಿಯೇ ಬಾಲ್ಯದ ದಟ್ಟವಾದ ಹನಿ ಅನುಭವಗಳು ಲೇಖಕರಲ್ಲಿ ಮಾಗುವ ಮುನ್ನವೇ ಗರಿಬಿಚ್ಚಿಗೊಂಡಿರುವುದನ್ನು ಕಾಣಬಹುದು. ಹಾಗೆಯೇ ಮಾಲಗತ್ತಿಯವರು ತಮ್ಮ ಆತ್ಮಕಥೆಯ ಕೊನೆಯಲ್ಲಿ 'ಈ ಕೃತಿಯ ಒಟ್ಟು ಬರವಣಿಗೆ ನಾನು ಉದ್ಯೋಗಾವಸ್ಥೆಗೆ ಕಾಲಿಡುವವರೆಗೆ ಮಾತ್ರ ಸಂಬಂಧಿಸಿದ್ದು" ಎಂದು ಉಲ್ಲೇಖಿಸುತ್ತಾರೆ. ಅಂದರೆ ಈ ಇಡೀ ಆತ್ಮಕಥೆ ಅವರ ಬಾಲ್ಯದ ದಿನಗಳಿಂದ ಹಿಡಿದು ಅವರು ಓದಿ ಊದ್ಯೋಗಕ್ಕೆ ಸೇರುವವರೆಗೆ ಮಾತ್ರ. ಅನುಭವಗಳನ್ನು ಹಿಡಿದಿಡಲು ಯಶಸ್ವಿಯಾಗಿದ್ದು, ಪ್ರಧಾನವಾಗಿ ಬಾಲ್ಯದ ಹಾಗೂ ಓದಿನ ದಿನಗಳ ಪರಧಿಯಲ್ಲಿಯೇ ಗಿರಕಿಹೊಡೆದಿರುವುದನ್ನು ಕಾಣಬಹುದು.

ಇನ್ನೂ ಲೇಖಕರ ಬಾಲ್ಯದ ದಿನಗಳಿಗೆ ಇಳಿಯುವುದಾದರೆ ಅವರು ಆರಂಭದಲ್ಲಿಯೇ ತಮ್ಮ ಕುಟುಂಬ ಸಾಮಾಜಿಕ, ಆರ್ಥಿಕ ಸ್ಥಿತಿಯನ್ನು ಬಿಚ್ಚಿಡುತ್ತಾ ನಮ್ಮದು ಅವಿಭಕ್ತ ಕುಟುಂಬ, ನಾಲ್ಕು ತಲೆಮಾರಿನವರು ಈಗಲೂ ಒಟ್ಟಿಗೆ ಬದುಕುತ್ತಿದ್ದೇವೆ. ಭೂಮಿ ಇದೆ, ಮನೆ ಇದೆ, ನಾನೇನು ತೀರ ನಿಕೃಷ್ಟ ಮಟ್ಟದ ಹೇಳಿಕೊಳ್ಳಲಿಕ್ಕು ಆಗದ ರೀತಿಯಲ್ಲಿ ಜೀವನವನ್ನು ಕಳೆದಿದ್ದೇನೆ ಎಂದು ಹೇಳಲಾರೆ "ಹೊಟ್ಟೆ ಬಟ್ಟೆ ಕಟ್ಟಿದರ ಏನಾರಗಳಸಾಕ. ಆ ಕೃತಿ ಇಲ್ಲಾಂದ್ರೆ ತಲಿಮ್ಯಾಲಿ ಚಾಪೆ ಹಾಕ್ಕೊಂಡು ಹೋಗುದ" ಎನ್ನುವ ನನ್ನಜ್ಜಿಯ ತಾತ್ವಿಕ ದೋರಣೆಯಂತೆ ಮನೆಯವರು ಹೊಲ ಮನೆ ಮಾಡಿದ್ದಾರೆ.

ನಮ್ಮ ಅವಿಭಕ್ತ ಕುಟುಂಬದ ಈ ಆಸ್ತಿಯನ್ನು ಒಡೆದು ಹಂಚಿದರೆ ಒಬ್ಬೊಬ್ಬರಿಗೆ ಅಂಗೈ ಊರುವಷ್ಟು ನೆಲ ಸಿಕ್ಕುವುದಿಲ್ಲ ! ನಿನಗೆ ಇಂತಹದೆಲ್ಲ ಹೇಳಿಕೊಳ್ಳಲು ಮನಸ್ಸಾದರೂ ಹೇಗೆ ಬರುತ್ತೆ ? ಎಂದು ಪ್ರಶ್ನಿಸಿದವರೂ ಇದ್ದಾರೆ ಎನ್ನುತ್ತಾರೆ.

ಇಷ್ಟು ಅಂಶಗಳನ್ನು ಗಮನಿಸಿದಾಗ ಲೇಖಕರ ಬದುಕು ನಡೆದುಬಂದ ಸಂಗತಿಯನ್ನು ತಿಳಿಸುವುದರ ಜೊತೆಗೆ ದಲಿತರ ಕುಟುಂಬಗಳು ಅವಿಭಕ್ತವಾಗಿದ್ದು ಮನೆಯ ಎಲ್ಲಾ ಸದಸ್ಯರೂ ಒಟ್ಟಿಗೆ ಬದುಕಿ ಬಾಳುತ್ತಿದ್ದ ಸಂಗತಿಯೂ ತಿಳಿಯುವುದರ ಜೊತೆಗೆ ಆ ಕುಟುಂಬದಲ್ಲಿನ ಬಡತನ ಸಾಪೀಕ್ಷವಾಗಿ ಕಂಡುಬರುತ್ತದೆ.

ಬಾಲ್ಯದ ದಿನಗಳಲ್ಲಿ ಸಾಮಾನ್ಯವಾಗಿ ಅಡ್ಡ ಹೆಸರುಗಳು ಪ್ರತಿಯೊಬ್ಬ ವ್ಯಕ್ತಿಗೂ ಅಂಟಿರುತ್ತವೆ. ಅಂತೆಯೇ ಮಾಲಗತ್ತಿಯವರನ್ನು ಬಾಲ್ಯದ ದಿನಗಳಲ್ಲಿ 'ಮಾಳಿ' ಎಂದು ಮನೆಯವರು ಮತ್ತು ಅಕ್ಕ ಪಕ್ಕದವರು ಸಂಭೋದಿಸುವ ಸನ್ನಿವೇಶವಿದೆ. ಹಾಗೆಯೇ ಲೇಖಕರ ಬಾಲ್ಯದಲ್ಲಿ ಒಡನಾಡಿಯಾಗಿ, ಮಾರ್ಗದರ್ಶಿಯಾಗಿ, ರಕ್ಷಕಳಾಗಿ ಹೆಜ್ಜೆ ಹೆಜ್ಜೆಗೂ ಲೇಖಕರೊಂದಿಗೆ ಬದುಕುವ ಆಯಿ ( ಅಜ್ಜಿ) ದೇವನೂರು ಮಹಾದೇವರ 'ಒಡಲಾಳ' ದ ಸಾಕವ್ವನಂತೆ ಪ್ರಭಾವಿ ವ್ಯಕ್ತಿತ್ವದವಳು.

ಲೇಖಕರೆ ಹೇಳುವಂತೆ ಈ 'ಆಯಿ' ಸ್ವಲ್ಪ ಬಾಯಿಬಡಕಿ ಶಕ್ತಿವಾನಳು ಕೂಡ. ತನ್ನ ಮೊಮ್ಮಕ್ಕಳನ್ನೆಲ್ಲಾ ಕೋಳಿಯಂತೆ ಕರೆಯುತ್ತಾ ಎಳೆದೆಳೆದು ರೆಕ್ಕೆಯೊಳಗಿಟ್ಟುಕೊಂಡಂತೆ ಕಾಪಾಡಿಕೊಂಡು ಬಂದ ಆಯಿಯಂತ ಮಾಗಿದ ಹೆಣ್ಣಿಗೆ ಲೇಖಕರು ಕೃತಜ್ಞತೆ ಸಲ್ಲಿಸುತ್ತಾರೆ. ಅಂತೆಯೇ ಎಲ್ಲಾ ದಲಿತ ಬದುಕಿನಲ್ಲೂ ಇಂಥ ಆಯಿಯರು ಆಶಾಕಿರಣವಾಗಿ ಒಂದೆಲ್ಲಾ ಒಂದು ರೂಪದಲ್ಲಿ ಬಂದು ಹೋಗುತ್ತಾರೆ ಎಂಬುದು ಸತ್ಯ ಸಂಗಾತಿ,

ಹೀಗೆ ಮಾಲಗತ್ತಿಯವರೂ ಬಾಲ್ಯ ಅನುಭವದ ನೆನಪಿನ ಸೌಧವನ್ನು ಹೊಕ್ಕಾಗ ಇನ್ನಷ್ಟು ಕುತೂಹಲ, ತಲ್ಲಣಗಳಿಗೆ ಎಡೆಮಾಡುತ್ತದೆ. ಲೇಖಕರು ಬಾಲ್ಯದಲ್ಲಿ ಹೆಣದ ಮೇಲೆ ಎಸೆದ ಪುಡಿಗಾಸನ್ನು ಆಯ್ದುಕೊಳ್ಳುವ ಥ್ರಿಲ್ ನ್ನು ಅನುಭವಿಸುತ್ತಾರೆ. ಇದು ದಲಿತರ ಆರ್ಥಿಕ ಮೂಲವಾಗಿಯೂ ಒಂದು ಕ್ಷಣಕ್ಕೆ ತೋರಬಹುದಾದರು ದಲಿತರ ಬಡತನದ ಪ್ರತಿಮೆಯಾಗಿ ಕಂಡುಬರುವುದರಲ್ಲಿ ಯಾವ ಅನುಮಾನವು ಇಲ್ಲಾ. ಹೆಣದ ಮೇಲೆ ವೀರಶೈವರು ತೂರುವ ಕಾಸು ನೆಲಕ್ಕೆ ಬಿದ್ದಮೇಲೆ ಕಚ್ಚಾಡಿ ಎತ್ತಿಕೊಳ್ಳುವುದು

ದಲಿತರ ಕೆಲಸ ಇಲ್ಲಿ ದಲಿತರು ಆ ಕಾಸು ಎತ್ತಿಕೊಳ್ಳುವುದು ದಲಿತರ ಕೆಲಸ ಇಲ್ಲಿ ದಲಿತರ ಎತ್ತಿಕೊಳ್ಳದೆ ಹೋದರೆ ಅವರು ತೂರುವ ಹಣಕ್ಕೆ ಬೆಲೆಯಾದವರೂ ಏನು? ಎಂವ ಪ್ರಶ್ನೆ ಉದ್ಭಸುತ್ತದೆ ಅವರು ಕಾಸು ತೂರಬೇಕು ತೂರಿದಹಣ ಉರುಳುತ್ತಾ ಹೆಣ ಹೊತ್ತವರ ಕಾಲಡಿ ಹಿಂದೆ ಅಳುತ್ತ ಬರುವವರ ಕಾಲಡಿ ಬೀಳಬೇಕು ಅಕಾಸನ್ನು ಅವರು ಧಾಟಿ ಪಾಪ ಕಳೆದು ಕೊಳ್ಳಬೇಕು ಅವರೆಲ್ಲಾ ತುಳಿದು ಹೋದ ಮೇಲೆ ದಲಿತರು ಅವುಗಳನ್ನು ಎತ್ತಿಕೊಳ್ಳಬೇಕು ಎಂಬ ಈ ಸಂಪ್ರದಾಯ ಸಾಮಾಜಿಕವಾಗಿ ಆರ್ಥಿಕವಾಗಿ ದಲಿತರು ನಯಾಪೈಸೆಗೂ ಕಷ್ಟಪಡುತಿದ್ದ ಸಂಗತಿಯನ್ನು ಲೇಖಕರು ಸ್ಪಷ್ಟವಾಗಿ ತಿಳಿಸುತ್ತಾರೆ. ಆದರೆ ಜನಪದೀಯ ಹಿನ್ನೆಲೆಯಲ್ಲಿ ನೋಡುವುದಾದರೆ ಹೆಣದ ಮೇಲೆ ಕಾಸು ಎಸೆಯುವುದು ಧನದ ಋಣಮುಕ್ತತೆಯ ಸಂಕೇತವಾಗಿಯೂ ಚಾಲ್ತಿಯಲ್ಲಿರುವುದನ್ನು ಕಾಣಬಹುದು.

ಅಲ್ಲದೆ ಸತ್ತವರ ಮನೆಯ ತಿಥಿ ಊಟಕ್ಕೆ ಧಾರ್ಮಿಕ ಜಾತ್ರೆ ಮತ್ತು ಮದುವೆ ಊಟಕ್ಕೆ ಲೇಖಕರು ಸೇರಿದಂತೆ ದಲಿತರು ಹಾಜರಾಗಲು ತುದಿಗಾಲಲ್ಲಿ ನಿಲ್ಲುತಿದ್ದರು ಅಲ್ಲದೆ ದಲಿತರನ್ನು ಕೊನೆಯ ಪಂಕ್ತಿಯಲ್ಲಿ ಕೂರಿಸಿ ಉಳಿದ ಊಟ ಹಾಕುತ್ತಿದ್ದರು ಇಲ್ಲಿ ದಲಿತರಲ್ಲಿದ್ದ ಬಡತನ ಹಾಗೂ ಸಮಾಜದ ಸಾಮಾಜಿಕ ವ್ಯವಸ್ಥೆಯ ಅಸಮಾನತೆಯನ್ನು ತೋರುತ್ತದೆ, ಅಲ್ಲದೆ ತೀರ ನಿಕೃಷ್ಟವೆಂಬಂತೆ ದಲಿತರು ಊಟವಾದ ಮೇಲೆ ಅವರ ಕೈಯನ್ನು ಬಣ್ಣದಲ್ಲಿ ಅದ್ದಿಸಿ ಕಳಿಸುತ್ತಿದ್ದರು ಅಲ್ಲದೆ. ದಲಿತರಿಗೆ ಪ್ರತ್ಯೇಕ ಪಂಕ್ತಿಯಲ್ಲಿ ಊಟ ಬಡಿಸುತ್ತಿದ್ದರು ಇಂಥಹ ಅಮಾನವೀಯ ಸ್ಥಿತಿಗಳು ಇನ್ನೂ ತಾಂಡವವಾಡುತ್ತಿದ್ದು ಇಂತಹ ದಲಿತರ ಸ್ಥಿತಿಗಳು ಅಸಮಾನ ಸಾಮಾಜಿಕ ವ್ಯವಸ್ಥೆಗೆ ಕನ್ನಡಿಯಾಗಿವೆ.

ಇದರ ನಡುವೆಯು ಮುಖ್ಯವಾಗಿ ಎಡೆಬಿಡದೆ ಕಾಡುವ ಪ್ರಸಂಗಗಳೆಂದರೆ ಮಾಜಿ ಪ್ರೇಯಸಿ ಬೆದೆಗೆ ಬಿದ್ದ ಎಮ್ಮೆ ಓಡಿ ಬಂದ ಕೋಣ ಹಂಡ್ಯಾನ ಲಾಳಿ ಕತ್ತರಿಸಿದ ಪ್ರಸಂಗ ದಲಿತ ಬರೆದದ್ದು ಎನ್ನುವ ಒಂದೇ ಕಾರಣಕ್ಕಾಗಿ ಮಠದಲ್ಲಿದ್ದ ರಾಘವೇಂದ್ರನ ಪಟವನ್ನು ಅಲ್ಲಿಂದ ತೆಗೆದುಹಾಕಿದ ಪ್ರಸಂಗಗಳು ಮಾನವೀಯ ಸಂವೇದನೆ ಶೀಲತೆಯುಳ್ಳ ಯಾರನ್ನಾದರು ಬೆಚ್ಚಿಬೀಳಿಸುವಂತಿವೆ. ಇಲ್ಲಿ ಲೇಖಕರ ನಿರ್ಮಲ ಪ್ರೀತಿಗೆ ಈ ಸಮಾಜದ ಕಂದಾಚಾರ ಹಾಗೂ ಜಾತಿಯ ಕಂದಕಗಳು

ಒಂದಾಗುವ ಮನಸ್ಸುಗಳನ್ನು ಒಡೆಯುತ್ತವೆ ಇದು ಇಂದಿಗೂ ಕಾಡುತ್ತಿರುವ ಭೂತಕಾರದ ಸಮಸ್ಯೆ ಅಲ್ಲದೆ ಬೆದೆಗೆ ಬಿದ್ದ ಎಮ್ಮೆ ಓಡಿಬಂದ ಕೋಣ ಪ್ರಸಂಗದಲ್ಲಿಯ ಪ್ರಾಣಿಗಳಿಗೂ ಹೇರುವ ಜಾತಿಯ ನಿರ್ಬಂಧ ಸೃಷ್ಟಿಯ ಜೀವಿಗಳಿಗೂ ಸಹಜವಾಗಿ ಸೇರಲು ಬಿಡದ ಈ ಸಮಾಜ ಪರಸ್ಪರ ಜನರನ್ನು ಒಂದಾಗಲು ಹೇಗೆ ತಾನೆ ಅವಕಾಶ ಕೊಡುತ್ತದೆ? ಇಂತಹ ಅಸಹಾಯಕತೆ U ಅಪಮಾನ ನೋವು ಹೀಗೆ ಮೌನದ ಆಳದಿಂದ ಏಳುವ ಈ ಪ್ರಶ್ನೆಗಳೀಗೆ ಕಾಲವೇ ಉತ್ತರಿಸಬೇಕಾಗುತ್ತದೆ. ಇವೆಲ್ಲದರ ನಡುವೆಯು ಲೇಖಕರ ಅಜ್ಜಿ ಬೆನ್ನೆಲುಬಾಗಿ ನಿಲ್ಲುತ್ತಾಳೆ.



ಈ ಆತ್ಮಕಥೆಯ ಬೀಕರತೆಯೊಳಗೆ ಮಡುಗಟ್ಟಿರುವ ಸಾಮಾಜಿಕತಯೆಡೆಗೆ ಮುಖಮಾಡಿ ನೋಡುವುದಾದರೆ ಮಾಲಗತ್ತಿಯವರೇ ಹೇಳುವಂತೆ ದಲಿತರಿಗೆ ಊಟದಲ್ಲಿ ಪ್ರತ್ಯೇಕ ಪಂಕ್ತಿ ಹೇಗೋ ಹಾಗೆಯೂ ಬಟ್ಟೆ ತೊಳೆಯಲು ಒಂದು ಪ್ರತ್ಯೆಕ ಕೆರೆಯಿದೆಈ ಕೆರೆಗೆ ಐದು ಕಡೆಗಳಲ್ಲು ಬಟ್ಟೆ ತೊಳೆಯುವ ಕಲ್ಲುಗಳನ್ನು ಹಾಕಲಾಗಿದೆ ಒಂದೊಂದು ಭಾಗದ ಕಲ್ಲುಗಳಿಗೆ ಒಂದೊಂದು ಸಮಾಜದ ಜನ ಗುತ್ತಿಗೆ ಹಿಡಿದಂತೆ ತೊರುತ್ತದೆ. ಸಾಮಾಜಿಕವಾಗಿ ದಲಿತರು ಅಸ್ಪೃಶ್ಯತೆಯನ್ನು ಅನುಭವಿಸುತ್ತಲೆ ಬದುಕ ಬೇಕಾಗುತಿತ್ತು ಈ ಕೆಳಾಗಿನ ಸಂಭಾಷಣೆ ಯಲ್ಲಿಯೇ ಅಸ್ಪೃಶ್ಯತೆಯ ಕ್ರೌರ್ಯತೆ ಕಾಣುತ್ತದೆ.

ಮೇ. ಜಾ : ನಿಮ್ಮದರ ಏನು ದೊಡ್ಡ ಜಾತಿ?
ದನ ತಿನ್ನೊ ಜಾತಿ

ಕೇ ಜಾ : ನಿಮ್ಮದರ ಏನು? ದೊಡ್ಡ ಜಾತಿ?
ಸತ್ತಿದ್ದ ತಿನ್ನೂ ಜಾತಿ

ಕ್ರೂರ ಸಂಪ್ರದಾಯದ ಜಾತಿಯ ಹೆಸರಿನಲ್ಲಿ ನಡೆದು ಕೊಂಡು ಬಂದಿರುವ ಈ ಘಟನೆಗಳನ್ನು ಗಮನಿಸಿದರೆ ದಲಿತರು ಸಾಮಾಜಿಕವಾಗಿ ಎಷ್ಟೊ ಬಹಿಷ್ಕಾರಕ್ಕೆ ತುಳಿತಕ್ಕೆ ಒಳಗಾಗುತ್ತಿದ್ದರೆಂಬುದು ಅರಿವಿಗೆ ಬರುತ್ತದೆ, ಅಲ್ಲದೆ ಊರಿಗೆ ಮಳೆ ಬರಲೆಂದು ನಡೆಸುತ್ತಿದ್ದ ಕ್ರೀಡೆಯಲ್ಲಿ ದಲಿತ ಮಹಿಳೆಯರನ್ನೆ ಏಕೆ? ಬಳಸಿಕೊಳ್ಳಬೇಕೆಂಬ ಪ್ರಶ್ನೆ ಸಹಜವಾಗಿಯೆ ಕಾಡುತ್ತದೆ ಅಂದರೆ ಹೀನ ಸಂಪ್ರಾದಯದ ಹೆಸರಿನಲ್ಲಿ ದಲಿತ ಸ್ತ್ರೀಯರ ಶೋಷಣೆ ಎಂದರೆ ತಪ್ಪಾಗಲಾರದು/.

ಇನ್ನೂ ಲೇಖಕರು ಮೇಲೆ ಆಗಿರುವ ಬಾಲ್ಯದಲ್ಲಿನ ಶಿಕ್ಷಣದ ಅನುಭವಗಳತ್ತ ನೋಟ ಹರಿಸುವುದಾದರೆ ಒಂದು ವರ್ಗಕ್ಕೆ ಸೀಮಿತವಾಗಿದ್ದ ಶಿಕ್ಷಣ ವ್ಯವಸ್ಥೆಯಲ್ಲಿ ದಲಿತರು ಓದುವುದಿರಲಿ ಶಾಲೆಯ ದರ್ಶನವನ್ನು ಪಡೆಯುವ ಅವಕಾಶವನ್ನು ಕಳೆದು ಕೊಂಡು ಬದುಕಿತ್ತಿದ್ದ ಅಂದಿನ ಸಮಾಜದಲ್ಲಿ ದಲಿತರು ಕಲಿಯಲು ಮುಂದಾದರೆ ಅನೇಕ ಹಿಂಸೆ ಅಪಮಾನಗಳಾನ್ನು ಎದುರಿಸಬೇಕಾಗುತಿತ್ತು ಎಂಬುದಕ್ಕೆ ಸಾಕ್ಷಿ ಕರಿಸಿ ನಾಳಿನ ಕಸದ ಪಾಳಿ ಮಾಲಕತ್ತಿ ಪ್ರಸಂಗದಲ್ಲಿ ಲೇಖಕರು ಅ ಬಾಲ್ಯದ ದಿನಗಳಲ್ಲಿ ಶಾಲೆಯಲ್ಲಿ ಗುರುಗಳಿಂದ ಅನುಭವಿಸಿದ ಹಿಂಸೆ ಅವಮಾನದ ಸಂಗತಿಗಳನ್ನು ಈ ಕೆಳಗಿನ ಸಂಭಾಷಣೆಯು ಸಾಕ್ಷಿಕರಿಸುತ್ತದೆ.

ಸೂಳೆ ಮಗನ ಕುಂಡೆಂದರ ತಬಲಾ ಆಗ್ಯವ ನೋಡ
ಸಾಲಿ ಉಪ್ಪಿಟ್ಟು ತಿಂದು ತಿಂದು

ಅಷ್ಟಕ್ಕೆ ನಿಲ್ಲದ ಶಿಕ್ಷೆ ನಾಳೆ ಕಸದ ಪಾಳಿ ಯಾರದಿದೆ ಎಂಬುದನ್ನು ಕಪ್ಪು ಹಲಗೆಯ ಮೇಲೆ ಬರೆಯಬೇಕಾಗುತ್ತಿತ್ತು ಹೀಗೆ ಹೆಸರನ್ನು ಕಪ್ಪು ಹಲಗೆಯ ಮೇಲೆ ಬರೆಯಲು ಸಹ ಹೇಸುತ್ತಿದ್ದರು ಏಕೆಂದರೆ ಕಸಗುಡಿಸವ ವಿದ್ಯಾರ್ಥಿಗಳು ದಲಿತರೆಂದು ಅಲ್ಲದೆ ದಲಿತ ವಿದ್ಯಾರ್ಥಿಗಳ ಹೆಸರನ್ನು ತಿರುಚಿ ಬರೆದು ಅಪಹಾಸ್ಯಗೊಳಿಸುವ ಪ್ರಸಂಗಗಳು ನೆಡೆಯುತ್ತಿದ್ದವು ಅಲ್ಲದೆ ದಲಿತ ವಿದ್ಯಾರ್ಥಿಗಳು ಊಟದ ಪಂಕ್ತಿಯಂತೆಯೇ ಶಾಲೆಯಲ್ಲಿಯು ಪ್ರತ್ಯೇಕಗೊಳ್ಳುತ್ತಿದ್ದರು ಇದೆಲ್ಲವನ್ನು ಪ್ರತಿಭಟಿಸುವ ಮನೋಭಾವ ಬಾಲಕ ಮಾಲಗತ್ತಿಗೆ ಇದ್ದಿತಾದರು ಅದನ್ನು ಸಾಮೂಹಿಕವಾಗಿ ವ್ಯಕ್ತಪಡಿಸಲು ಸಾಧ್ಯವಾಗುತ್ತಿರಲಿಲ್ಲ.

ಕತ್ತಿ.....ಕತ್ತಿನೇ.....ಕತ್ತೆಲ್ಲರ ಕುದುರ್‍ಯಾಕ್ಕದೇನ ?

ಕತ್ತಿಗೆಲ್ಲ ಯಾರಬೇಕು ಹತ್ತಿಕಾಳ ನೀರ ?..........ಎಂದೂ ಹಂಗಿಸುತ್ತಾ ನಿರ್ದಾಕ್ಷಿಣ್ಯವಾಗಿ ದಂಡಿಸುತ್ತಿದ್ದ ಉಪಾಧ್ಯಾಯರು ಲೇಖಕರ ಅಂಗಿಯಿಂದಲೇ ತಮ್ಮ ಆಸನವನ್ನು ಒರೆಸಿಕೊಳ್ಳುತ್ತಿದ್ದ ಪ್ರಸಂಗ ಅಕ್ಷರಜ್ಞಾನವಿದ್ದು ವಿವೇಕವಿಲ್ಲದಂತೆ ವರ್ತಿಸುವ ಶಿಕ್ಷಕನ ಮನೋಭೂಮಿಕೆಯಲ್ಲಿರುವ ಜಾತಿವಾದಿತನವನ್ನು ಹೊರಹಾಕುತ್ತದೆ.

ಮುಂದುವರೆದು ಲೇಖಕರು ತಮಗೆ ಪ್ರಾಥಮಿಕ ಶಾಲೆಗೆ ಹೋಗುವಾಗಿನಿಂದ ಹಿಡಿದು ಪ್ರೌಢಶಿಕ್ಷಣದ ವರೆಗೂ ಅವರನ್ನು ಕಾಡಿದವುಗಳೆಂದರೆ 'ಜನಿವಾರಗಳು ಮತ್ತು ಶಿವದಾರಗಳು' ಅನಂತರದಲ್ಲಿ ಮೋಜಾಗಿ ಕಂಡದ್ದು ಶಿವದಾರದಲ್ಲಿಯ ರಂಗುಗಳು ಎನ್ನುತ್ತಾರೆ. ಯಾಕೆಂದರೆ ಈ ದಾರಗಳೆ ದಲಿತರ ಬದುಕನ್ನು ಮೃತ್ಯುಕೂಪದಲ್ಲಿಟ್ಟು ತಮಾಷೆ ನೋಡಿದ್ದು! ಈ ತಮಾಷೆಯಲ್ಲಿ ಕಷ್ಟ ಅನುಭವಿಸಿದ್ದು ದಲಿತರು ಎನ್ನುವುದನ್ನು ಮರೆಯುವಂತಿಲ್ಲ.

ಮಾಲಗತ್ತಿಯವರ ಗಂಭೀರ ಓದಿನ ಪ್ರಸಂಗವನ್ನು ನೋಡುವುದಾದರೆ ಲೇಖಕರ ಪರೀಕ್ಷೆ ಒಂದು. ಎರಡು ತಿಂಗಳು ಇದೆ ಎನ್ನುವಾಗ ವಿದ್ಯುತ್ ದೀಪಗಳು ಕೇರಿಗೆ ಪ್ರವೇಶವಾಗುತ್ತಿತ್ತು. ಆದರೆ ಇನ್ನೂ ಯಾರ ಮನೆಯೊಳಗೂ ಪ್ರವೇಶ ಕಂಡಿರಲಿಲ್ಲ. ಹಾಗಾಗಿ ಲೇಖಕರು ರಸ್ತೆಯ ವಿದ್ಯುತ್ ಬೆಳಕನ್ನು ಅವಲಂಬಿಸಿ ಓದುತ್ತಿದ್ದರು. ಇಂಥ ಪರಿಸ್ಥಿತಿಯಲ್ಲಿಯು ಸವರ್ಣೀಯರು ತಮ್ಮ ಕೆಟ್ಟ ಚಾಳಿಗೆಲ್ಲ ಆತ್ಮೀಯವಾಗಿದ್ದ ಲೇಖಕರ ಓದುವ ತಾಣವನ್ನು ಬದಲಿಸಲು ವಿದ್ಯುತ್ ಕಂಬದ ಬಲ್ಬನ್ನು ಹಾರಿಸುತ್ತಿದ್ದರು.

ಇವುಗಳೆಲ್ಲವೂ ದಲಿತ ಬದುಕಿನ ಬಾಲ್ಯದ ಮೇಲೆ ನಡೆದ ದೈಹಿಕ ಮತ್ತು ಮಾನಸಿಕ ಅವಘಡಗಳು ಮತ್ತು ಅತ್ಯಾಚಾರಗಳು. ಇಂತಹ ಭೀಕರ ಅಸಮಾನತೆಯ ಕಂದಕಗಳ ನಡುವೆಯು ಮಾಲಗತ್ತಿಯವರ ಬಾಲ್ಯದ ಬದುಕು ಅನ್ಯಾಯದ ವಾರಿಧಿಯನ್ನು ಈಜಿ ದಡ ಸೇರಿರುವುದು ಮಾತ್ರ ವಿಸ್ಮಯಗೊಳಿಸುತ್ತದೆ.

**ಊರು-ಕೇರಿ' ಆತ್ಮಕಥೆಯಲ್ಲಿ ಬಾಲ್ಯ**

ದಲಿತ ಕವಿ ಡಾ. ಸಿದ್ಧಲಿಂಗಯ್ಯನವರು ತಮ್ಮ ಬದುಕಿನ ಹಸಿ ಅನುಭವಗಳನ್ನು ಊರುಕೇರಿ ಭಾಗ-೧, ಭಾಗ-೨ ಕೃತಿಗಳ ಮೂಲಕ ವಿಭಾಗಿಸಿ ತಮ್ಮ ಬದುಕಿನ ಪುಟಗಳನ್ನು ತೆರೆದಿಟ್ಟಿದ್ದಾರೆ. ಈ ಆತ್ಮಕಥೆಗಳ ಎರಡು ಭಾಗಗಳಲ್ಲಿ ಊರು ಕೇರಿ ಭಾಗ-೧ರಲ್ಲಿ ಅವರ ಬಾಲ್ಯದ ಅನುಭವಗಳು ಮಡುಗಟ್ಟಿರುವುದನ್ನು ಕಾಣಬಹುದು. ಅಂದರೆ ಅವರ ಬಾಲ್ಯದ ಆರಂಭದ ದಿನಗಳು ಪ್ರಾಥಮಿಕ ಹಾಗೂ ಪ್ರೌಢಶಾಲೆಯ ದಿನಗಳು, ಹಾಸ್ಟಲ್ ಜೀವನ, ಹಾಗೂ ಅವರ ಕಾಲೇಜು ಜೀವನದ ದಿನಗಳು ಊರುಕೇರಿಯ ಮೊದಲ ಭಾಗದ

ಪುಟಗಳಲ್ಲಿ ಹರಿದಾಡಿವೆ. ಅಲ್ಲದೆ ಅವರ ಬಾಲ್ಯದ ಆರಂಭದ ಬದುಕು ಅವರ ಹುಟ್ಟೂರಾದ ಮಂಚನಬೆಲೆಯ ಪರಿಸರದಲ್ಲಿಯೇ ಮೊಳಕೆಯೊಡೆಯುವುದರಿಂದ ಊರುಕೇರಿಯ ಮೊದಲ ಭಾಗ ಹೆಚ್ಚು ಪ್ರಸ್ತುತವೆನಿಸುತ್ತದೆ.

ಎಲ್ಲಾ ದಲಿತ ಆತ್ಮಕಥೆಗಳು ಪ್ರಧಾನವಾಗಿ ದಲಿತ ಸಮುದಾಯದ ಅವಮಾನ, ನೋವಿನ ಚರಿತ್ರೆಯನ್ನು ದಾಖಲಿಸುತ್ತ ಒಂದೇ ನೆಲೆಯಲ್ಲಿ ಸಾಗುತ್ತವೆಯಾದರೂ ಸಿದ್ಧಲಿಂಗಯ್ಯನವರ ಊರು-ಕೇರಿ ಸ್ವಲ್ಪ ಭಿನ್ನ ನೆಲೆಯಲ್ಲಿ ನಿಲ್ಲುತ್ತದೆ. ಕಾರಣ ಲೇಖಕರು ತಮ್ಮ ಬದುಕಿನ ಅನುಭವಗಳನ್ನು ಹಾಸ್ಯ, ವ್ಯಂಗ್ಯ, ವಿಡಂಬನೆಗಳ ಮೂಲಕ ಹೇಳುತ್ತಲೆ ನೋವನು ಉಣಬಡಿಸುತ್ತ ಹೋಗುತ್ತಾರೆ. ಹಾಗಾಗಿಯೇ ಬಡತನ ಮತ್ತು ಪ್ರತಿಭೆಗಳ ಸಂಬಂಧ ಊರು-ಕೇರಿಯ ಮುಖ್ಯವಸ್ತುವಾಗಿ ನಿಲ್ಲುತ್ತದೆ.

ಸಿದ್ಧಲಿಂಗಯ್ಯನವರ ಆತ್ಮಕಥೆಯಲ್ಲಿ ದಲಿತ ಲೇಖಕರ ಕೃತಿಗಳಲ್ಲಿ ಮುಖ್ಯಕರೀಸಬಹುದಾದ ಎಲ್ಲಾ ಅಂಶಗಳು ಅಡಗಿರುವುದನ್ನು ಗುರ್ತಿಸಬಹುದು. ಹಾಗಾಗಿಯೇ ಡಿ.ಆರ್. ನಾಗರಾಜ್‌ರವರು ಈ ಕೃತಿಯನ್ನು ಕುರಿತು ಊರುಕೇರಿಯಲ್ಲಿ ಸಹಜವಾಗಿ ಬಡತನ, ರೊಚ್ಚು, ಅವಮಾನಗಳೆಲ್ಲ ಕಾಣಿಸಿಕೊಂಡಿವೆ. ಇಡೀ ಆತ್ಮಕಥೆಯಲ್ಲಿ ಹೊಸದಾದ ಅನಿರೀಕ್ಷಿತವಾದ ಒಂದು ಮುಖ್ಯಾಂಗವೂ ಇದೆ. ಅದು ಬಡತನ ಮತ್ತು ಹಿಂಸೆಯ ಬಗ್ಗೆ 'ಭೀತಿಯ ಗೈರು ಹಾಜರಿ' (ಊರುಕೇರಿ-೧ ಮುನ್ನುಡಿ) ಎಂದು ಅಭಿಪ್ರಾಯಿಸಿದ್ದಾರೆ.

ಈ ಕೃತಿಯ ವಸ್ತು ದಲಿತ ಕೃತಿಗಳಿಗೆ ಸಾಮ್ಯವಾದದ್ದು ಸಹಜವಾದದ್ದು. ಆದರೆ ಈ ವಸ್ತುವನ್ನು ನಿರ್ವಹಿಸುವ ಧ್ವನಿಮಾತ್ರ ಭಿನ್ನವಾದದ್ದು. ತಮ್ಮ ಬದುಕಿನ ಹಸಿವು ಅವಮಾನಗಳನ್ನು ತೆರೆದಿಡುತ್ತಲೇ ಅವುಗಳನ್ನು ಮೀರುವ ಮಾರ್ಗಗಳನ್ನು ತೋರಿಸುತ್ತಾ ಹೋಗುತ್ತಾರೆ. ಈ ಹಿನ್ನೆಲೆಯಲ್ಲಿಯೇ ಕೃತಿ ವಿಶಿಷ್ಟವೆನಿಸುತ್ತದೆ.

ಸಿದ್ದಲಿಂಗಯ್ಯನವರ ವಿಶಿಷ್ಟತೆ ಅವರು ಅನುಭವಗಳನ್ನು ನಿರೂಪಿಸಿರುವ ಶೈಲಿಯಲ್ಲಿದೆ. ಇಲ್ಲಿ ವ್ಯಂಗ್ಯ, ಪ್ರಬಂಧ ಧ್ವನಿಗಳ ಮೂಲಕ ಹೊಸಬಗೆಯ ಆತ್ಮ ಪ್ರತಿಮೆಗಳನ್ನು ಕೃತಿ ಸೃಷ್ಟಿಸುತ್ತದೆ. ಆದ್ದರಿಂದಲೇ 'ಊರು-ಕೇರಿ'ಯಲ್ಲಿ ದಲಿತ ಬದುಕನ್ನು ಹೊಸ ರೀತಿಯಲ್ಲಿ ಪ್ರತಿಮೀಕರಿಸಿ ತೋರಿಸುವ ಪ್ರಯತ್ನ ನಡೆದಿದೆ

ಈ ಊರು-ಕೇರಿಯ ಮೊದಲ ಭಾಗದ ಆತ್ಮಕಥನ ಲೇಖಕರ ಬಾಲ್ಯಮತ್ತು ಓದಿನ ದಿನಗಳಷ್ಟನ್ನೆ ಕುರಿತದ್ದು ಎಂಬುದು ಬಹಳ ಕುತೂಹಲದ ವಿಷಯ. ಆಧುನಿಕ ಕನ್ನಡ ಸಾಹಿತ್ಯ ಸಂವೇದನೆಯಲ್ಲಿ ಈ ಕೃತಿ ವಿಭಿನ್ನ ಬೆಳಕನ್ನು ಚೆಲ್ಲುತ್ತದೆ. ಬಾಲ್ಯಕಾಲ ಎನ್ನುವುದು ಬರೀ ವಯಸ್ಸಲ್ಲ. ಅದೊಂದು ಸಮೃದ್ಧವಾಗಿ ಅರಳಿ ಪರಸ್ಪರ ಬೆರೆತು ವಿಕಾಸ ಹೊಂದುವ ಸ್ಥಿತಿ ನಿಜಕ್ಕೂ ರೋಮಾಂಚನಕಾರಿ ಇದು ಕನ್ನಡ ಸಾಹಿತ್ಯದ ಎಲ್ಲಾ ಆತ್ಮಕಥೆಗಳಲ್ಲಿಯು ಕಾಣಬಹುದಾದ ಹೊಳಹು.

ಈ ಹಿನ್ನೆಲೆಯಲ್ಲಿ ಕೃತಿಯ ಒಳಹೊಕ್ಕು ಸಿದ್ಧಲಿಂಗಯ್ಯನವರ ಬಾಲ್ಯದ ದಿನಗಳನ್ನು ಕೇಂದ್ರೀಕರಿಸಿ ನೋಡುವುದು ಮುಖ್ಯವೆನಿಸುತ್ತದೆ. ಲೇಖಕರ ಬಾಲ್ಯದ ಕರಿಛಾಯೆ ತಂದುಕೊಳ್ಳುವುದೆ ಐನೋರ ಹೊಲ, ಪ್ರಸಂಗದ ಹೊಸ್ತಿಲಲ್ಲಿಯೇ ಕೇರಿಯಲ್ಲಿ ಕೊನೆಯ ಮನ ನಮ್ಮದು, ನಮ್ಮ ಮನೆಗೂ ಕೊನೆಯಲ್ಲಿ ಇನ್ನೊಂದು ಮನೆ ಇತ್ತೇನೋ ? ಅದರ ಛಾವಣಿ ಕುಸಿದು ಕೇವಲ ಮೂರು ನಾಲ್ಕು ಅಡಿ ಎತ್ತರದ ಮಣ್ಣಿನಗೋಡೆ ಮಾತ್ರ ಇದ್ದವು. ಈ ಸ್ಥಿತಿಯೇ ಇಡೀ ದಲಿತ ಸಮುದಾಯದ ಆರ್ಥಿಕ, ಸಾಮಾಜಿಕ ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಅಲ್ಲದೆ ಲೇಖಕರು ನಮ್ಮ ಕೇರಿಯ ಎಂಬ ಮಾತಿನಲ್ಲಿಯೇ ಸಾಮಾಜಿಕವಾಗಿ ಈ ವ್ಯವಸ್ಥೆ ದಲಿತರನ್ನು ಅಸ್ಪೃಶ್ಯತೆಯ ಹೆಸರಿನಲ್ಲಿ ಮನುಷ್ಯ ಸಂಬಂಧಗಳನ್ನು ಹೇಗೆ ಬೇರ್ಪಡಿಸಿತ್ತು ಎಂಬುದನ್ನು ತೋರಿಸುತ್ತದೆ.

ಮುಂದುವರೆದು ಬ್ರಾಹ್ಮಣರು ಕೊಡುವ ತಂಗಳು ಅನ್ನಕ್ಕಾಗಿ ಜಮೀನಿನಲ್ಲಿ ಎತ್ತಾಗಿ ದುಡಿಯುತ್ತಿದ್ದ ಲೇಖಕರ ತಂದೆ, ಅದಕ್ಕೆ ಪ್ರತಿಯಾಗಿ ತಂಗಳು ಅನ್ನಕ್ಕಾಗಿ ಬ್ರಾಹ್ಮಣರ ಮನೆ ಬಾಗಿಲಿನಲ್ಲಿ ಪಾತ್ರೆ ಹಿಡಿದುಕಾಯುತ್ತಿದ್ದ ಸ್ಥಿತಿ ಈ ವ್ಯವಸ್ಥೆಯ ಅಸಮಾನತೆಗೆ ಹಿಡಿದ ಕನ್ನಡಿಯಂತಿದ್ದು ದಲಿತರ ಹಸಿವಿನ ದಯನೀಯ ಸ್ಥಿತಿಯನ್ನು ಸಾಕ್ಷೀಕರಿಸುತ್ತದೆ. ಈ ದಾರುಣ ಬದುಕಿನ ಸ್ಥಿತಿ ಬಾಲಕ ಸಿದ್ಧಲಿಂಗಯ್ಯನನ್ನು ಮೂಕಿತನನ್ನಾಗಿಸುತ್ತದೆ. ಇಂದಿಗೂ ದಲಿತರ ಬದುಕಿನ ಸ್ಥಿತಿ ಇದಕ್ಕೆ ಹೊರತಾಗಿಲ್ಲ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

ದಲಿತರು ಬಡತನವನ್ನು ಎಷ್ಟು ಗಂಭೀರವಾಗಿ ನಂಬಿದ್ದರೂ ಅಷ್ಟೇ ಗಂಭೀರ ಭಕ್ತಿಯನ್ನು ದೇವರ ಮೇಲೆ ಇಟ್ಟುಕೊಂಡಿದ್ದರು. 'ನೊರ ನೊರ ಹಲ್ಲು ಕಡಿಯುವ ಜಲ್ದಗೆರೆ ಅಮ್ಮ ಕೇರಿಯ ಜನರ ಮೇಲೆ ದೇವರು ಬರುತ್ತಿದ್ದ ಸಂಗತಿಯನ್ನು ಲೇಖಕರು

ಹಾಸ್ಯಮಯವಾಗಿಯೇ ಹೇಳುತ್ತಾರೆ. ಈ ಪ್ರಸಂಗದಲ್ಲಿ ಮುಖ್ಯವಾಗಿ ಆ ದೇವರು ದಲಿತ ಹೆಂಗಸರು ಮತ್ತು ಗಂಡಸರ ಮೇಲೆ ಬರುತ್ತಿತ್ತೆಂಬುದು ಆಶ್ಚರ್ಯ ಹುಟ್ಟಿಸುತ್ತದೆ.! ಅಲ್ಲದೆ ಊರಿಗೆ ಬೆಂಕಿ ಮಳೆಬರುತ್ತದೆ ! ಸತ್ತು ಹೋಗಿರುವ ಅಜ್ಜ-ಅಜ್ಜಿ, ತಂದೆ-ತಾಯಿಗಳು, ಗೆಳೆಯ-ಗೆಳತಿಯರು ಕನಸಿನಲ್ಲಿ ದೆವ್ವವಾಗಿ ಕಾಡುತ್ತಾರೆ. ಲೇಖಕರು ಹೇಳುವ ಇನ್ನೂ ಮುಂತಾದ ಪ್ರಸಂಗಗಳಲ್ಲಿ ದಲಿತರು ವೈಚಾರಿಕತೆಯಿಂದ ವಂಚಿತರಾಗಿ ವ್ಯವಸ್ಥೆಯ ಮೌಢ್ಯತೆಯ ಕೂಪಕ್ಕೆ ತಳ್ಳಲ್ಪಟ್ಟಿದ್ದರು ಎಂಬುದನ್ನು ಸಿದ್ಧಲಿಂಗಯ್ಯನವರ ಬಾಲ್ಯದ ಈ ಪ್ರಸಂಗದಿಂದ ಮನಗಾಣಬಹುದು. ಈ ಧಾರ್ಮಿಕ ಘಟನೆಗಳು ಲೇಖಕರಲ್ಲಿ ಕುತೂಹಲ ಹುಟ್ಟಿಸುತ್ತವೆಯಾದರೂ 'ತಾಯಿಯು'ಅಮ್ಮ, ಅಜ್ಜನ ನೆನಪಾಯಿತೆಂದು ಕಣ್ಣೀರು ಹರಿಸುತ್ತಿದ್ದ ತಾಯಿಯ ಮುಖಮುದ್ರೆಯಿಂದ ಲೇಖಕರಿಗೂ ನಾನು ಮಂಚನಬೆಲೆಯ ಮೋಹಕ್ಕೆ ಆಗಾಗ ಒಳಗಾಗುತ್ತಿದ್ದೆ' ಎಂಬ ಮಾತು ಅವರಲ್ಲಿದ್ದು ಮಣ್ಣಿನ ಸೆಳೆತವನ್ನು ತೋರಿಸುತ್ತದೆ.

ಗಂಧರ್ವ ಲೋಕದ ಬಂಜಾರರು ಪ್ರಸಂಗದಲ್ಲಿ ಹಾಸ್ಯದ ಜೊತೆಗೆ ಬಡತನದ ಚಿತ್ರಣವೂ ಮೂಡಿದೆ. ಎಲ್ಲೆಲ್ಲೂ ಬರಗಾಲ ಬಂದು ಅನ್ನಕ್ಕಾಗಿ ಜನ ಕಣ್ಣು ಬಾಯಿ ಬಿಡುತ್ತಿದ್ದರು. ಇಂತಹ ಸ್ಥಿತಿಯಲ್ಲಿಯು ಜನತೆ ಮೂಡನಂಬಿಕೆಗೆ ಬಲಿಯಾಗಿ 'ಪರ' ಎಂಬ ಹಬ್ಬ ಮಾಡುತ್ತಿದ್ದರು. ಈ ಹಬ್ಬದಲ್ಲಿ ದಲಿತರು ಪಾಲುದಾರರಾಗುತ್ತಿದ್ದರು ! ಆದರೆ 'ಪರ'ದ ಊಟಕ್ಕೆ ದಲಿತರನ್ನು ಪ್ರತ್ಯೇಕವಾಗಿ ಒಂದು ಮೂಲೆಯಲ್ಲಿ ಕೂರಿಸುತ್ತಿದ್ದರು ಎನ್ನುವ ಲೇಖಕರ ಮನದಲ್ಲಿ ನೋವಿನ ಕಿಡಿಯನ್ನು ಹುಡುಕಬಹುದು. ಇಂಥಹ ಹಲವಾರು ಬಾಲ್ಯದಹಸಿ ಅನುಭವಗಳು ಲೇಖಕರ ಮನದಾಳದಲ್ಲಿ ಪ್ರಶ್ನಾತೀತವಾಗಿ ಕಾಡುತ್ತವೆ.

ಇಲ್ಲಿ ದಲಿತರನ್ನು ಹೊರಗಿಡುವ ಮೇಲ್ವರ್ಗ ಮತ್ತು ಬಡತನವನ್ನು 'ಮೈಹೊದ್ದಿರುವ ದಲಿತರ ಬದುಕಿನ ಈ ವೈಪರಿತ್ಯಗಳು ಸಹಜವಾಗಿ ತೋರುವುದರ ಜೊತೆಗೆ ಮನುಕುಲವನ್ನು ಬೆಂಬಿಡದೆ ಕಾಡುತ್ತವೆ.

ಒಂದೆಡೆ ಊರಿನ ಮೇಲ್ವರ್ಗದವರ ಮನೆಗಳು ಹಾಗೂ ಅವರ ಬೀದಿಗಳು ಆದುನೀಕರಣಗೊಳ್ಳುತ್ತಿದ್ದರೆ. ಇನ್ನೊಂದೆಡೆ ದಲಿತರ ಗುಡಿಸಲುಗಳು ಗುಡಿಸಲುಗಳಾಗಿಯೇ ಉಳಿದಿದ್ದ ವ್ಯವಸ್ಥೆ ಬದಲಾವಣೆಯ ಕನಸು ಕಾಣುತ್ತಿದ್ದ ಬಾಲಕ ಸಿದ್ಧಲಿಂಗಯ್ಯನವರನ್ನು

ಈ ವ್ಯವಸ್ಥೆಯ ತಾರತಮ್ಯ ಮಂಕಾಗಿಸುತ್ತದೆ. ಜೀವಿಸುವ ದಲಿತರಿಗಷ್ಟೇ ಅಲ್ಲ. ಈ ಬಡತನ ಅವರು ವಾಸಿಸುವ ಕೇರಿಗೆ, ಆಶ್ರಯಿಸಿರುವ ಗುಡಿಸಲುಗಳಿಗೆ, ತಿರುಗಾಡುವ ರಸ್ತೆಗಳನ್ನು ಬಿಡದೆ ಅಸಮಾನತೆಯ ಶೋಷಣೆ ತಾಂಡವವಾಡುತ್ತಿತ್ತು ಎಂಬುದನ್ನು ಲೇಖಕರು ಹಾಸ್ಯಮಯವಾಗಿಯೇ ದಾಖಲಿಸುತ್ತಾರೆ.

ಇನ್ನು ಲೇಖಕರು ಇದೇ ಊರಿನ ದಲಿತಕೇರಿಯ ಆರ್ಥಿಕ ಸ್ಥಿತಿಯನ್ನು ತಮ್ಮ ಕುಟುಂಬ ಆರ್ಥಿಕ ಸ್ಥಿತಿಯೊಂದಿಗೆ ಹೇಳಲು ಪ್ರಯತ್ನಿಸಿರುವುದನ್ನು ಕಾಣಬಹುದು. ತಂದೆ ಕೂಲಿ ಮಾಡಿ ದುಡಿದ ಹಣ ಮೂರೊತ್ತು ಊಟಕ್ಕೆ ಸಾಲುತ್ತಿರಲಿಲ್ಲ. ಅಲ್ಲದೆ ಕೈತುಂಬಾಸಾಲ ಅಂಗೈ ಅಗಲ ಹೊಲವೆ ನಮೆಗ ಆಧಾರ, ತಾಯಿ ಕಾಡಿಗೆಹೋಗಿ ಸೌದೆ ತಂದು ಸಂತೆಯಲ್ಲಿ ಮಾರುತ್ತಿದ್ದರು. ಕೆಲವು ದಿನ ಗೆಣಸು ತಿಂದು ಬದುಕುತ್ತಿದ್ದೆವು. ಕೆಲವು ದಿನ ಕಡ್ಲೆಪುರಿ ತಿಂದು ಹೊಟ್ಟೆ ತುಂಬಾ ನೀರು ಕುಡಿದು ಕಾಲ ಕಳೆಯುತ್ತಿದ್ದವು. ಇಲ್ಲಿ ದಲಿತರು ಶತಶತಮಾನಗಳಿಂದಲೂ ದುಡಿಯಲು ಭೂಮಿಯಿಲ್ಲದೆ, ಬೇರೆಯವರ ಹೊಲದ ಜೀತದಾಳುಗಳಾಗಿ ದುಡಿದ ಕುಟುಂಬ ನಿರ್ವಹಣೆಗೆ ಸಾಲಗಾರರಾಗಿ ಸಾಲದ ಶೂಲದಲ್ಲಿ ತಮ್ಮನ್ನು ಕಳೆದುಕೊಳ್ಳುತ್ತಿದ್ದರು. ಇದು ಕೇವಲ ಲೇಖಕರ ಬಡತನ್ನಷ್ಟೆ ಪ್ರತಿನಿದಿಸದೆ ಇಡೀ ದಲಿತ ಸಮುದಾಯದ ಬಡತನದ ನೈಜತೆಯನ್ನು ಎತ್ತಿ ಹಿಡಿದಿರುವುದನ್ನು ಗ್ರಹಿಸಬಹುದು.

ಧಾರ್ಮಿಕವಾಗಿ ಸಿದ್ಧಲಿಂಗಯ್ಯನವರ ಬಾಲ್ಯದ ಅನುಭವಗಳನ್ನು ನೋಡುವುದಾದರೆ ಲೇಖಕರು ಮಂಟೇಸ್ವಾಮಿ ಪರಂಪರೆಗೆ ಸೇರಿದವರು. ಮಂಟೇಸ್ವಾಮಿ ಅವರ ಮನೆದೇವರು ಹಾಗಾಗಿ ಮಂಟೇಸ್ವಾಮಿ ಪರಂಪರೆಯ ಗುರುಗಳನ್ನು ಅವರಿರುವಲ್ಲಿಗೆ ಹೋಗಿ ಲೇಖಕರ ಕುಟುಂಬದವರು ಪೂಜಿಸುತ್ತಿದ್ದರೂ ಆದರೆ ಆ ಗುರುಗಳು ಮಾತ್ರ ದಲಿತಕೇರಿಗೆ ಬರುತ್ತಿರಲಿಲ್ಲ. ಹಾಗಾಗಿ ಗುರುಗಳು ದಲಿತ ಕೇರಿಯ ಬಳಿಯ ಇಪ್ಪೆಮರದ ಕೆಳಗೆ ಮಾತ್ರ ನಿಲ್ಲುತ್ತಿದ್ದರು. ಯಾಕೆಂದರೆ ಗುರುಗಳು ಸವರ್ಣಿಯರಾದ್ದರಿಂದ ಧಾರ್ಮಿಕವಾಗಿಯೂ ಅಸ್ಪ್ರಶ್ಯತೆಯು ದಲಿತರನ್ನು ದೂರವಿರಿಸಿತ್ತು. ಈವ್ಯವಸ್ಥೆಯ ನಡುವೆಯು ಲೇಖಕರ ಕುಟುಂಬ ಅವರನ್ನು ಆರಾಧಿಸುತ್ತಿತ್ತು ಎಂಬುದು ದಲಿತರಲ್ಲಿ ಮನೆ ಮಾಡಿದ ನಿಷ್ಕಲ್ಮಶ ಮುಗ್ಧಭಕ್ತಿಯನ್ನು ತೋರಿಸುತ್ತದೆ. ಅಲ್ಲದೆ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಈ ಪರಂಪರೆ

ಮುಂದುವರೆದಿದ್ದು ದಲಿತರಿಗೆ ಕೆಳವರ್ಗದ ಪ್ರತ್ಯೇಕ ದೇವರುಗಳಿದ್ದು ಮೇಲ್ವರ್ಗದ ಜನರ ದೇವಾಲಯಗಳು ದಲಿತರಿಂದ ದೂರವಿರುವುದನ್ನು ನೋಡಬಹುದು.

ಮನುಷ್ಯ ದೇವರು, ಧರ್ಮ, ಜಾತಿಯ ಹೆಸರಿನಲ್ಲಿ ಅಸಮಾನತೆಯ ಸಮಾಜವನ್ನು ಸೃಷ್ಟಿಸಿಕೊಂಡು ಬದುಕುತ್ತಿದ್ದಾನೆ. ಇದರ ನಡುವೆಯೂಲೇಖಕರು ತಮ್ಮ ಬಾಲ್ಯದ ಅನುಭವವನ್ನು ಹೇಳುತ್ತಾ ''ನನ್ನ ಕೈಯಲ್ಲಿ ಈದಕುರಿ'' ಪ್ರಸಂಗದಲ್ಲಿ ತಾನು ದನ ಕುರಿಗಳನ್ನು ಮೇಯಿಸಲು ಹೋಗುತ್ತಿದ್ದೆ. ಅವುಗಳಲ್ಲಿ ಒಂದು ಕುರಿಯನ್ನು ಕಂಡರೆ ಪ್ರಾಣ ಅದೂ ನನ್ನನ್ನು ಬಿಟ್ಟು ಎಲ್ಲಿಯೂ ಹೋಗುತ್ತಿರಲಿಲ್ಲ. ಅಲ್ಲದೆ ಆ ಕುರಿ ನನ್ನ ಮಡಲಿನಲ್ಲಿಯೇ ಮರಿಹಾಕಿತು. ಅಲ್ಲದೆ ನನ್ನ ಬೆರಳನ್ನು ಕಚ್ಚಿತು ಎಂದು ಮನಬಿಚ್ಚಿ ಹೇಳುವಲ್ಲಿ ಅವರಲ್ಲಿದ್ದ ನಿರ್ಮಲ ಪ್ರೀತಿ ಹೊರಹೊಮ್ಮುತ್ತದೆ ಮನುಷ್ಯ ಮನುಷ್ಯನ ನಡುವೆ ಇಲ್ಲದ ಅಂತಃಕರಣದ ಮಾನವೀಯ ಸಂಬಂಧಗಳು ಹೇಗೆ ಪ್ರಾಣಿಗಳ ಜೊತೆ ಬೆಸೆದುಕೊಳ್ಳುತ್ತವೆ ಎಂಬುದನ್ನು ಲೇಖಕರು ಸೂಚ್ಯೀಕರಿಸುತ್ತಾರೆ.

ಧಾರ್ಮಿಕವಾಗಿ ದೇವರು, ಗುರುಗಳು, ದೇವಸ್ಥಾನಗಳಿಂದ ಅಸ್ಪೃಶ್ಯತೆ ಹಣೆಪಟ್ಟಿಯಿಂದ ಧಾರ್ಮಿಕವಾಗಿಯು ಶೋಷಿತರಾಗುತ್ತಿದ್ದ ಆ ಊರಿನ ದಲಿತರು, ಸಾಮಾಜಿಕವಾಗಿಯೂ ಶೋಷಿತರಾಗುತ್ತಿದ್ದರು ಎಂಬುದನ್ನು ಲೇಖಕರು 'ಹೋಟೆಲ್ ಇಟ್ಟ ದೊಡ್ಡಪ್ಪ' ಪ್ರಸಂಗದಲ್ಲಿ ಲೇಖಕರ ದೊಡ್ಡಪ್ಪನ ಹೋಟೆಲಿಗೆ ದಲಿತರಷ್ಟೆ ಹೋಗುತ್ತಿದ್ದರು. ಅಲ್ಲದೆ ಲೇಖಕರು ಬಾಲ್ಯದಲ್ಲಿಇಡ್ಲಿ ತಿನ್ನಲು ಸವರ್ಣೀಯರ ಹೋಟೆಲ್ಲಿಗೆ ಹೋದರೆ ದಲಿತರೆಂಬ ಕಾರಣದಿಂದ ಅವರನ್ನು ಹಾಗೂ ಅವರ ಕೇರಿಯ ಹುಡುಗರನ್ನು ಹೊರಗಡೆಯೆ ಒಂದು ಮೂಲೆಯಲ್ಲಿ ನಿಲ್ಲಿಸಿ ತಿನ್ನಲು ಇಡ್ಲಿ ಕೊಡುತ್ತಿದ್ದರೂ ಎಂದು ಹೇಳುವ ಲೇಖಕರು ಅದ್ಯಾವುದೂ ನನೆಗ ಮುಖ್ಯವೆನಿಸುತ್ತಿರಲಿಲ್ಲ. ಆ ಕ್ಷಣದಲ್ಲಿ ಹಸಿವು ನೀಗಿಸಿಕೊಳ್ಳುವುದಷ್ಟೆ ನಮಗೆ ಮುಖ್ಯವಾಗುತ್ತಿತ್ತೆಂದು ಹಸಿವಿನ ಅನಿವಾರ್ಯತೆಯನ್ನು ಹೇಳುತ್ತಾನೆ. ಆ ಸಾಮಾಜಿಕ ಅಸಮಾನತೆಯನ್ನು ಗೌಣಿಕರಿಸುತ್ತಾರೆ. ಇಲ್ಲಿ ದಲಿತರನ್ನು ಕಾಡುತ್ತಿದ್ದ ಹಸಿವು ಬಡತನಗಳ ಮುಂದೆ ಅಸ್ಪೃಶ್ಯತೆಯ ಕರಿನೆರಳು ಅವರಿಗೆ ಮುಖ್ಯವಾಗುತ್ತಿರಲಿಲ್ಲ.

ಇನ್ನು ಸಿದ್ಧಲಿಂಗಯ್ಯನವರ ಬಾಲ್ಯದ ದಿನಗಳಲ್ಲಿನ ಶಿಕ್ಷಣ ವ್ಯವಸ್ಥೆಯ ಸ್ಥಿತಿಗತಿಗಳು ಹಾಸ್ಯದ ಜೊತೆ ಜೊತೆಯಲ್ಲಿಯೇ ಅವರ ಕೆಲವು ಬಾಲ್ಯದ ಅನುಭವಗಳು ಗಂಭೀರ ಚಿಂತನೆಗೆ ಎಳೆದೊಯ್ಯುತ್ತಲೇ ಮೂಕಪ್ರೇಕ್ಷಕರನ್ನಾಗಿಸುತ್ತವೆ.

ಲೇಖಕರು ತಮ್ಮ ಬಾಲ್ಯದ ಎರಡು ವರ್ಷಗಳ ಶಿಕ್ಷಣವನ್ನು ತಾಯಿಯ ಊರಾದ ಮಂಚನಬೆಲೆಯಲ್ಲಿ ಕಲಿತರು. ನಂತರ ಮುಂದಿನ ಕಲಿಕೆಗೆ ಬೆಂಗಳೂರಿನ ಶ್ರೀರಾಮಪುರಕ್ಕೆ ತಮ್ಮ ಕುಟುಂಬವೆ ಅಲ್ಲಿ ನೆಲಸಿದ್ದರಿಂದ ಅವರ ಮುಂದಿನ ಶಿಕ್ಷಣ ಶ್ರೀರಾಂಪುರ ಹಾಗೂ ವಿದ್ಯಾರ್ಥಿನಿಲಯಗಳಲ್ಲಿಯೇ ನಡೆಯಿತು.

ಸಿದ್ಧಲಿಂಗಯ್ಯನವರು ತಮ್ಮ ಕಲಿಕೆಯ ಪ್ರಾಥಮಿಕ ಹಂತದಲ್ಲಿಯೇ ತಮ್ಮ ಉಪಾಧ್ಯಾಯರುಗಳು ಮತ್ತು ಶಾಲೆಗೆ ಬರುತ್ತಿದ್ದ ಮೇಲಾಧಿಕಾರಿಗಳ ಹಾವಭಾವಗಳನ್ನು ಅನುಸರಿಸಿ ಅವರಂತೆಯೇ ಅನುಕರಣೆ ಮಾಡಿ ಎಲ್ಲರನ್ನು ನಗಿಸುತ್ತಿದ್ದರಲ್ಲದೆ ಉಪಾಧ್ಯಾಯರಿಂದ ಮೆಚ್ಚುಗೆಯನ್ನು ಗಳಿಸಿಕೊಳ್ಳಲು ಯಶಸ್ವಿಯಾಗುತ್ತಿದ್ದರು. ಲೇಖಕರೆ ಹೇಳುವಂತೆ ನಾನು ಪ್ರಾಥಮಿಕ ಶಾಲೆಯಲ್ಲಿರುವಾಗ 'ನಾಗಪ್ಪಚಾರ್' ಎಂಬ ಗುರುಗಳಿದ್ದರೂ ಅವರು ಜಾತ್ಯಾತೀತರಾಗಿದ್ದುಎಲ್ಲಾ ಮಕ್ಕಳನ್ನು ಸಮವಾಗಿ ಕಾಣುತ್ತಿದ್ದರು ಎಂಬಲ್ಲಿ ಲೇಖಕರಲ್ಲಿದ್ದ ಧೈನ್ಯತೆಯ ಮನಸ್ಸುತೆರೆದುಕೊಳ್ಳುತ್ತದೆ. ಹಾಗಾಗಿಯೇ ತಮ್ಮ ಕಲಿಕೆಯ ದಿನಗಳನ್ನು ತೆರೆದ ನಗು ಮನಸ್ಸಿನಿಂದಲೇ ಹೇಳುತ್ತಾ ಹೋಗುತ್ತಾರೆ. ಅಲ್ಲದೆ 'ನಾಗಪ್ಪಾಚಾರ್‌ರಂತಹ ಗುರುಗಳು ಬಾಲಕ ಸಿದ್ದಲಿಂಗಯ್ಯನಲ್ಲಿದ್ದ ಪ್ರತಿಭೆಯನ್ನು ಪ್ರೋತ್ಸಾಹಿಸುತ್ತಾ ಲೇಖಕರಮುಂದಿನ ಕಲಿಕೆಗೆ ಉತ್ತೇಜಿತರಾಗುತ್ತಾರೆ.

ತರಗತಿಯಲ್ಲಿ ಎಲ್ಲರೂ ನಾನು ಹಾಸ್ಯ ಮಾಡುತ್ತೇನೆಂದು ಗುರುಗಳು ಸೇರಿದಂತೆ ಎಲ್ಲರೂ ನನ್ನಿಂದ ಅನುಕರಣೆ ಮಾಡಿಸುತ್ತಾ ಹೊಟ್ಟೆ ಬಿರಿಯುವಂತೆ ನಗುತ್ತಿದ್ದರು. ಅಲ್ಲದೆ ನನ್ನನ್ನು ಹಾಸ್ಯಮಾಡುವಂತೆ ಹುರಿದಂಬಿಸುತ್ತಿದ್ದರು.ನಾಗಪ್ಪಚಾರ್ ಎಂಬಗುರುಗಳು ನಮ್ಮನ್ನೆಲ್ಲ ಸಾಲಾಗಿ ನಿಲ್ಲಿಸಿ ಕೆಲವು ಘೋಷಣೆ ಕೂಗಿಸುತ್ತಾ ಊರಲ್ಲೆಲ್ಲಾ ಮೆರವಣಿಗೆ ಮಾಡಿಸುತ್ತಿದ್ದರು.ನಮಗೆ ಅದು ನಿಜವಾಗಲೂ ಮನರಂಜನೆಯೇ ಆಗಿರುತ್ತಿತ್ತು. ಕೊನೆಯಲ್ಲಿ ಪೆಪ್ಪರಮೆಂಟ್ ಹಂಚುತ್ತಿದ್ದರು. ಈ ಅನುಭವಸಾರದಲ್ಲಿಯೇ ಸಿದ್ಧಲಿಂಗಯ್ಯನವರ ಮನೆಯಲ್ಲಿ ಕಿತ್ತಿತಿನ್ನುವ ಬಡತನವಿದ್ದರೂ ಶಾಲೆಯ ಆ

ಸಂತೋಷದ ದಿನಗಳು, ಗುರುಗಳ ಆ ಅಗಾಧಪ್ರೀತಿ, ಪ್ರೋತ್ಸಾಹ ಅವರನ್ನು ಸಂತೋಷದ ಕಲಿಕೆಗೆ ದೂಡುತ್ತಿತ್ತು ಎಂಬುದನ್ನು ಅವರ ಅನುಭವಗಳಿಂದಲೇ ಗ್ರಹಿಸಬಹುದು.

ಸಿದ್ಧಲಿಂಗಯ್ಯನವರು ಮಂಚನಬೆಲೆಯ ಪ್ರಾಥಮಿಕ ಶಾಲೆಯನ್ನು ಬಿಟ್ಟು ಮೂರನೇ ತರಗತಿಗೆ ಶ್ರೀರಾಂಪುರದ ಶಾಲೆಗೆ ಸೇರಿದಂತೆ ಕಲಿಕೆಯ ಹೊಸ ವಾತಾವರಣ ಅವರನ್ನು ಕಲಿಕೆಗೆ ಹೆಚ್ಚು ಪ್ರೋತ್ಸಾಹಿಸುತ್ತಲೇ ಹೋಯಿತು ಎಂಬುದು ಎಷ್ಟು ಮುಖ್ಯವೆನಿಸುತ್ತದೆಯೋ ಅಷ್ಟೆ ಅವರು ಪ್ರೌಢರಾದಂತೆ ತಂದೆತಾಯಿಯರ ಬಡತನ, ಅವರಿಗೆ ಅರಿವಿಲ್ಲದಂತೆ ಅವಮಾನದ ಕಾವು ತಟ್ಟುತ್ತಿದ್ದುದನ್ನು ಅವುಗಳನ್ನು ಮೀರಿ ಕಲಿಕೆಗೆ ತೊಡಗುತ್ತಿದ್ದುದರಿಂದ ಲೇಖಕರು ನೋವಿನಲ್ಲಿಯು ತಿಳಿಹಾಸ್ಯದ ಲೇಪನ ಹಚ್ಚಿ ಬರೆದು ಕೊಂಡಿರುವುದನ್ನು ಕಾಣಬಹುದು.

ಲೇಖಕರು ಮೂರನೇ ತರಗತಿಯಲ್ಲಿರುವಾಗ ನಡೆದ ಒಂದು ಪ್ರಸಂಗವನ್ನು ಮನಸ್ಸಿಗೆ ತಟ್ಟುವಂತೆ ಹೇಳುತ್ತಾರೆ. ಹೊಸ ಶಾಲೆಯ ಅಂಡಾಳಮ್ಮ ಎಂಬ ಉಪಾಧ್ಯಾಯಿನಿ ನಮಗೆಲ್ಲಾ ಪುಳಿಯೋಗರೆ ಮಾಡಿ ಶಾಲೆಯಲ್ಲಿ ಹಂಚುತ್ತಿದ್ದರು. ಅದನ್ನು ತಿಂದದ್ದು ಅದೇ ಮೊದಲ ಸಲ. ಅದುವರೆಗೂ ನನಗೆ ಅದರ ಹೆಸರೂ ಗೊತ್ತಿರಲಿಲ್ಲ ಎನ್ನುವ ಅವರ ಮಾತುಗಳಲ್ಲಿ ಹಸಿವಿನ ಧಾರುಣತೆ ಮನೆಮಾಡಿರುವುದನ್ನು ಕಾಣಬಹುದು. ಹಾಗೆಯೇ ಇನ್ನೊಂದು ಪ್ರಸಂಗದಲ್ಲಿ ಸರ್ಕಾರ ಬಡ ವಿದ್ಯಾರ್ಥಿಗಳಿಗೆ ಉಚಿತ ಪೆನ್ನು ಪುಸ್ತಕಗಳನ್ನು ಹಂಚುತ್ತಿರುವಾಗ ತರಗತಿಯ ಬಡವಿದ್ಯಾರ್ಥಿಗಳೆಲ್ಲಾ ನಿಂತುಕೊಂಡರು. ನಾನು ಮಾತ್ರ ಮನೆಯಲ್ಲಿ ಬಡತನವಿದ್ದರೂ ಕುಳಿತೇ ಇದ್ದೆ. ಆ ವೇಳೆಗೆ ಹರಕುಬಟ್ಟೆ, ಕ್ಷೌರವಿಲ್ಲದ ಮುಖದೊಂದಿಗೆ ನನ್ನ ತಂದೆ ಪ್ರತ್ಯಕ್ಷರಾದರು. ನನ್ನ ತಂದೆಯ ಸ್ಥಿತಿಯನ್ನು ನೋಡಿದ ಗುರುಗಳು ತುಂಬಾ ವ್ಯಥೆ ಪಟ್ಟರು. ಅಲ್ಲದೆ ನನಗೂ ಉಚಿತ ಪುಸ್ತಕಗಳನ್ನು ಕೊಟ್ಟರು. ಈ ಪ್ರಸಂಗ ನನಗೆ ತುಂಬಾ ಮುಜುಗರವನ್ನುಂಟು ಮಾಡಿತು. ಅಂದಿನಿಂದ ಆ ಮೇಡಂ ನನ್ನ ಬಗ್ಗೆ ವಿಶೇಷ ಕಾಳಜಿ ವಹಿಸುತ್ತಿದ್ದರು ಎನ್ನುವಲ್ಲಿ ಲೇಖಕರು ತಮ್ಮ ಕುಟುಂಬದಲ್ಲಿದ್ದ ಹಸಿವು, ಬಡತನವನ್ನು ಶಾಲೆಯ ದಿನಗಳಲ್ಲಾದರೂ ಮರೆಯಾಗಿಸಲು ಪ್ರಯತ್ನಿಸಿರುವ ಸೂಕ್ಷ್ಮತೆಯನ್ನು ತಿಳಿಯಬಹುದಾದರೂ ತಾನು ದಲಿತ ಬಡ ವಿದ್ಯಾರ್ಥಿ ಎಂದು ತಿಳಿದರೆ ಗುರುಗಳಿಗಿದ್ದ ನನ್ನ ಮೇಲಿನ ಪ್ರೀತಿ ಕಡಿಮೆಯಾಗಬಹುದೆಂಬ ಆತಂಕವೂ ಲೇಖಕರನ್ನು ಕಾಡಿರಬಹುದು.

ಈ ಆತ್ಮಕಥೆಯಲ್ಲಿ ಬಹಳ ಮುಖ್ಯವಾಗಿ ನಾವು ಗ್ರಹಿಸಬೇಕಾದ ಸಂಗತಿಯೆಂದರೆ ಸಿದ್ಧಲಿಂಗಯ್ಯ ಎಷ್ಟೇ ಪ್ರತಿಭಾವಂತ ವಿದ್ಯಾರ್ಥಿಯೆನಿಸಿದರು ದಲಿತ ವಿದ್ಯಾರ್ಥಿಯಾಗಿ ಅವರನ್ನು ಕಾಡುವ ಅಸ್ಪೃಶ್ಯತೆ ಅವಮಾನ, ಕೀಳರಿಮೆಗಳು ಅವುಗಳ ನಡುವೆಯು ಪುಟಿದೇಳುವ ಆತ್ಮವಿಶ್ವಾಸ, ಕಲಿಕೆಯಲ್ಲಿನ ಪ್ರಗತಿ ಶಿಕ್ಷಕರುಗಳ ಪ್ರೋತ್ಸಾಹ ಇವುಗಳೆಲ್ಲಾ

ಹಾಗಾಗಿಯೇ ಲೇಖಕರ ಕಲಿಕೆಯ ಮೇಲೆ ಅವರ ಕುಟುಂಬದ ಬಡತನ ಗಾಢ ಪ್ರಭಾವ ಬೀರಿರುವುದನ್ನು ಕಾಣಬಹುದು. ಏಕೆಂದರೆ ಒಂದೆಡೆ ತಂದೆ ' ಹಸಿವಿನಲ್ಲಿಯು ಸೌದೆ ಒಡೆದು ಕುಟುಂಬ ನಿರ್ವಹಿಸುತ್ತಿದ್ದರು. ಇತ್ತ ತಾಯಿ, ಲೇಖಕರು ತೂಗುತ್ತಿದ್ದ ವಿದ್ಯಾರ್ಥಿ ನಿಲಯದಲ್ಲಿಯೇ ಕಸಗುಡಿಸುವ ಕೆಲಸ ಮಾಡುತ್ತಿದ್ದರು. ಹಾಸ್ಟಲ್‌ನಲ್ಲಿ ಅವರ ತಾಯಿಗೆ ಕೊಡುತ್ತಿದ್ದ ಊಟವೇ ಲೇಖಕರ ಕುಟುಂಬದ ಒಂದ್ಪೊತ್ತಿನ ಹಸಿವನ್ನು ನೀಗಿಸುತ್ತಿತ್ತು. ಇದರ ನಡುವೆ ಮಧ್ಯಾಹ್ನ ಊಟಕ್ಕೆಂದು ಬ್ಯಾಗಿನಲ್ಲಿ ಬಿಚ್ಚಿಟ್ಟುಕೊಳ್ಳುತ್ತಿದ್ದ ತಂಗಳುಮುದ್ದೆ ಮತ್ತು ಉಪ್ಪನ್ನು ಕಂಡು ಅಪಹಾಸ್ಯ ಮಾಡುತ್ತಿದ್ದ ಸಹಪಾಟಿ ಹುಡುಗರು, ಮತ್ತೊಂದೆಡೆ ಮಾಡಿದ ಸಾಲ ತೀರಿಸಲಾಗದ ಅಪ್ಪನಿಗೆ ಲೇವಾದೇವಿಗಾರರು ಕೊಡುತ್ತಿದ್ದ ದೈಹಿಕ ಮತ್ತು ಮಾನಸಿಕ ಹಿಂಸೆಗಳು ಶಾಲೆಯಲ್ಲಿ ಸಹಪಾಠಿ ವಿದ್ಯಾರ್ಥಿಗಳಿಂದ ಆಗುತ್ತಿದ್ದ ನಿಂದೆ, ಅಪಮಾನಗಳು ಇವುಗಳೆಲ್ಲಾ ಬಾಲ್ಯದಲ್ಲಿ ಸಿದ್ಧಲಿಂಗಯ್ಯನವರನ್ನು ಅಪಾರವಾಗಿ ಕಾಡಿವೆಯಾದರೂ ಈ ಬಾಲ್ಯದ ಒಂದೊಂದು ಘಟನೆಗಳು ಉಳಿಪೆಟ್ಟುಗಳಾಗಿ ಲೇಖಕರ ಪ್ರಬುದ್ಧ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ನೆರವಾಗಿರುವುದನ್ನು ಈ ಆತ್ಮಕಥೆಯ ಒಳಸುಳಿವುಗಳಿಂದ ಗ್ರಹಿಸಬಹುದು.

ಒಟ್ಟಿನಲ್ಲಿ ಇಡಿಯಾಗಿ ಸಿದ್ಧಲಿಂಗಯ್ಯನವರ ಆತ್ಮಕಥೆಯನ್ನು ವಿವೇಚಿಸುವುದಾದರೆ ದಲಿತ ಕುಟುಂಬದಲ್ಲಿ ಹುಟ್ಟಿದ ಹುಡುಗನೊಬ್ಬ ತನ್ನ ಪುಟ್ಟ ಕಣ್ಣುಗಳಲ್ಲಿ ಮನಸ್ಸಿನಲ್ಲಿ ತುಂಬಿ ಕೊಳ್ಳುವ ಸಾಮಾಜಿಕ ಬದುಕು, ಶಿಕ್ಷಣದಲ್ಲಿ ಪಡೆದುಕೊಳ್ಳುವ ಅರಿವು, ದಲಿತರ ಮೇಲೆ ಪ್ರಹರಿಸುವ ಹಿಂಸೆ, ಅವಮಾನ ಶೋಷಣೆಗಳ ಕತ್ತಲಿನಲ್ಲಿಯು ಬದುಕಿನ ಬೆಳದಿಂಗಳನ್ನು ಕಾಣಬೇಕೆಂಬ ತವಕ, ಹೊಸ ಸಮಾಜ ನಿರ್ಮಾಣದ ತುಡಿತ, ಇವುಗಳ ಜೊತೆಯಲ್ಲೇ ಸಮಾಜಮುಖಿ ಚಿಂತನೆಗಳು ಪ್ರಧಾನವಾಗಿ ಆವರಿಸಿವೆ.

## ೨. 'ಮಣೆಗಾರ' ಆತ್ಮಕಥೆಯಲ್ಲಿ ಬಾಲ್ಯ

ತಮ್ಮ ಚೊಚ್ಚಲ ಬರವಣಿಗೆಯಾಗಿರುವ 'ಮಣೆಗಾರ' ಆತ್ಮಕಥನದ ಮೂಲಕ ಸೃಜನಶೀಲ ಬರಹಕ್ಕೆ ತೊಡಗಿಸಿಕೊಳ್ಳುತ್ತಿರುವ ತುಂಬಾಡಿ ರಾಮಯ್ಯನವರು ದಲಿತ ಬದುಕಿನ ಒಳಲೋಕವನ್ನು ಹಾಗೂ ಈ ಸಮಾಜದ ಎಲ್ಲಾ ರೀತಿಯ ವೈರುಧ್ಯಗಳನ್ನು ತಮ್ಮ ಆತ್ಮಕಥೆಯ ಮೂಲಕ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಈ ಹಿನ್ನೆಲೆಯಲ್ಲಿ 'ಮಣೆಗಾರ' ಆತ್ಮಕಥನವು ತಲ್ಲಣಗೊಳಿಸುವ ವಿಶಿಷ್ಟ ಅನುಭವಗಳ ದಾಖಲೆಯಾಗಿದ್ದು, ವಾಸ್ತವವಾಗಿ ಭಾರತದ ನಮ್ಮ ಹಳ್ಳಿಗಾಡಿನ ಆತ್ಮಕಥನವೇ ಆಗಿ ಸಾಮಾಜಿಕ, ಪಾರಂಪರಿಕ ಸೂಕ್ಷ್ಮತೆಗಳನ್ನೊಳಗೊಂಡು ಹೊರಹೊಮ್ಮಿರುವುದು ಈ ಕೃತಿಯ ವೈಶಿಷ್ಟ್ಯ.

ಮುಖ್ಯವಾಗಿ ಸಮಾಜದ ಬದಲಾವಣೆಗಾಗಿ ಹಾತೊರೆಯುವ ಚಳುವಳಿಗಳು ತನ್ನ ಒಡನಾಟಗಳನ್ನು ಮಾಗಿಸಿ ಅವನೊಳಗೆ ಸೃಜನಶೀಲತೆಯ ಬೀಜ ಹೇಗೆ ಮೊಳೆಯುವಂತೆ ಪ್ರೇರೇಪಿಸುತ್ತವೆ ಎಂಬುದಕ್ಕೆ ತುಂಬಾಡಿ ರಾಮಯ್ಯನವರ 'ಮಣೆಗಾರ' ಕೃತಿ ಜೀವಂತಿಕೆಗೆ ಸಾಕ್ಷಿಯಾಗಿ ಈ ಸಮಾಜದ ಮುಂದೆ ನಿಲ್ಲುತ್ತದೆ.

'ಮಣೆಗಾರ' ಆತ್ಮಕಥೆಯಲ್ಲಿ ಎರಡು ಭಾಗಗಳಿದ್ದು ಮೊದಲನೆಯ ಭಾಗದಲ್ಲಿನ ಪ್ರಸಂಗಗಳು ಲೇಖಕರ ಬಾಲ್ಯದ ದಟ್ಟ ಅನುಭವಗಳನ್ನು ಬಿಚ್ಚಿಟ್ಟರೆ ಎರಡನೆಯ ಭಾಗ ಲೇಖಕರ ಪ್ರಬುದ್ಧ ಹೋರಾಟದ ಬದುಕನ್ನು ತೆರೆದಿಡುತ್ತದೆ. ಕೃತಿಯ ಆರಂಭದ ಹೊಸ್ತಿಲಲ್ಲಿಯೇ ಈ ಇಕ್ರಕಟ್ಟಿದವರು ಯಾರು ? ಪ್ರಸಂಗದಲ್ಲಿಯೇ ಲೇಖಕರು ತಮ್ಮ ಕುಟುಂಬದ ಬಡತನದ ಬವಣೆಯನ್ನು ಹೇಳುತ್ತಾ ನಮಗಿದ್ದುದು ಒಂದೊಂದೆ ಹರಿದ ಅಂಗಿ, ಚೆಡ್ಡಿಗಳು, ಮನೆತುಂಬಾ ಓಡಾಡುತ್ತಿದ್ದ ತಿಗಣೆಗಳು, ಕೂರೆಗಳು, ನಮ್ಮ ತಲೆಗಳಲ್ಲಿ ಮನೆಮಾಡಿದ್ದ ಹೇನು-ಸೀರುಗಳು, ಪ್ರತಿಮೆಗಳಂತಿದ್ದು ತುಂಬಾಡಿಯವರ ಬಾಲ್ಯದ ನಿಕೃಷ್ಟ ಬಡತನವನ್ನು ಪುಷ್ಟೀಕರಿಸುತ್ತವೆ. ಜೊತೆಗೆ ತಾಯಿಯೊಬ್ಬಳು ಮಕ್ಕಳ ಜವಾಬ್ದಾರಿಯನ್ನು ನಿಭಾಯಿಸುವ ದಾರುಣತೆ ತುಂಬಾ ಶೋಚನೀಯವಾಗಿ ಕಾಣುತ್ತದೆ.

ಈಆತ್ಮಕಥನದಲ್ಲಿ ರಾಮಯ್ಯನವರ ಬಡತನದ ಬಾಲ್ಯ ಅರಿವಿಲ್ಲದಂತೆ ಅಲೆದಾಡಿದೆ. ತಂದೆಯೊಂದಿಗೆ ಚಪ್ಪಲಿ ಹೊಲೆದು, ತಮಟೆ ಬಡಿದು ಬಾಲ್ಯದ ಜೀವ ಬದುಕಿನ ನೊಗಹೊತ್ತಿದೆ. ಹೆಂಡ ಕುಡಿದು ತೂರಾಡುವ ದಲಿತರ ಬದುಕನ್ನು ಕಂಡು ಖುಷಿ

ಪಟ್ಟಿದೆ. ಆದರೆ ಆ ಖುಷಿಯ ಹಿಂದೆ ನೋವಿನ ತಡಿಕೆಗಳಿವೆ ಎಂಬ ಸೂಚನೆಯು ತಿಳಿಯದಿರಲಾರದು. ಇಲ್ಲಿ ಮುಖ್ಯವಾಗಿ ತುಂಬಾಡಿಯವರ ಬಾಲ್ಯ ಆಟವಾಡುವಾಗಲೇ ಹಸಿವಿನ ಕರಾಳತೆ ತೀವ್ರವಾಗಿ ಕಾಡಿದೆ. ಶೋಷಣೆಯ ಉರಿ ತಟ್ಟುವ ಮೊದಲೇ ತಮಟೆ ಬಡಿಯುತ್ತಾ ಅದನ್ನು ಮರೆತಿದ್ದಾರೆ. ಇವೆಲ್ಲಾ ಜಾಗೃತವಾಗುವ ಹೊತ್ತಿಗೆ ಲೇಖಕರ ಶಿಕ್ಷಣದ ಮನಸ್ಸು ಬಲಿತು ದಲಿತರ ಬದುಕಿನ ಹೊಸನಕ್ಕೆ ಅವರ ಜೀವ ಹಾತೊರೆಯುವುದನ್ನು ಅವರ ಆತ್ಮಕಥೆಯ ಎರಡನೆ ಭಾಗದಲ್ಲಿ ಕಾಣಬಹುದು.

ತುಂಬಾಡಿ ರಾಮಯ್ಯನವರದು ಎಂಟು ಜನ ಮಕ್ಕಳು ಇದ್ದ ತುಂಬು ಸಂಸಾರ 'ಚಪ್ಪಲಿಹೊಲೆಯುವ ಅವರ ತಂದೆಯ। ಕಾಯಕವೇ ಆ ಬಡ ಕುಟುಂಬಕ್ಕೆ ಆಧಾರ. ಇಂಥಹ ಸಂಕಷ್ಟದ ನಡುವೆಯು ಬಾಲ್ಯದಲ್ಲಿಯೇ ತಂದೆಯ ದುಡಿಮೆಗೆ ನೆರವಾಗುವ ಲೇಖಕರ ಜೀವ ಇನ್ನೊಂದು ಕಡೆ ಶಿಕ್ಷಣ ಕಲಿಕೆಗೆ ತುಡಿಯುತ್ತದೆ. ಆದರೆ ವ್ಯವಸ್ಥೆಯ ಕ್ರೂರತೆ ಶಿಕ್ಷಣಕ್ಕೂ ಅಂಟಿ ತನ್ನ ಅಣ್ಣನನ್ನು ಬಲಿ ತೆಗೆದು ಕೊಳ್ಳುತ್ತದೆ. ಬಡತನದಲ್ಲಿಯು ಸ್ವಾಭಿಮಾನದ ಬದುಕು ದಲಿತರನ್ನು ಹಲವಾರು ಕಷ್ಟಗಳಿಗೆ ದೂಡುತ್ತದೆ ಎಂಬುದನ್ನು ಮಣೆಗಾರ' ಆತ್ಮಕಥೆ ಸಮರ್ಥಿಸುತ್ತದೆ.

ದಲಿತರ ಆರ್ಥಿಕ ಸ್ಥಿತಿಯನ್ನು ಪ್ರತಿಬಿಂಬಿಸುವಂತಿರುವ ಅಪ್ಪನ ಅವತಾರಗಳು' ಪ್ರಸಂಗ ಲೇಖಕರ ತಂದೆ ತಮ್ಮ ತುಂಬು ಕುಟುಂಬದ ನಿರ್ವಹಣೆಗಾಗಿ ಊರೂರು ಸುತ್ತುತ್ತ ಚಪ್ಪಲಿ ಹೊಲೆಯುತ್ತಾ ಧವಸ ಧಾನ್ಯಗಳನ್ನು ಸಂಗ್ರಹಿಸುತ್ತಿದ ಪರಿ ಅದು ಬದುಕಿಗೆ ಸಾಲದೆಂದಾಗ, ಹಂದಿಸಾಕುವುದು, ತಮಟೆ ಬಡಿಯುವುದು, ಸತ್ತದನಗಳನ್ನು ಎಳೆಯುವುದು, ಮುಂತಾದವೃತ್ತಿಗಳನ್ನು ಕುಲಕಸುಬೆಂಬಂತೆ ನಿರ್ವಹಿಸುತ್ತಿದ್ದರು.

ಈ ಅವತಾರದ ಕಾಯಕಗಳು ಬಾಲಕ ತುಂಬಾಡಿ ರಾಮಯ್ಯನನ್ನು ಬೆಂಬಿಡದೆ ಕಾಡಿರುವುದನ್ನು ಕಾಣಬಹುದು. ಅಂತೆಯೇ ರಾಮಯ್ಯನವರು ಬಾಲ್ಯದಲ್ಲಿಯೇ ತಂದೆಯ ಜೊತೆ ಚಪ್ಪಲಿ ಹೊಲೆಯಲು, ಮಾರಾಟಮಾಡಲು ಹಳ್ಳಿ, ಸಂತೆಗಳಿಗೆ ಓದಿನ ನಡುವೆಯು ಹೋಗುತ್ತಿದ್ದರು. ಹಂದಿಗಳನ್ನು ಸಾಕುತ್ತಿದ್ದರು. ಇವೆಲ್ಲಾ ದಲಿತರೆ ಮಾಡಬೇಕಾದ ಕುಲಕಸುಬುಗಳೆಂದು ಈ ಸಮಾಜ ಸಮರ್ಥಿಸುತ್ತದೆಯಾದರೂ ಅವುಗಳನ್ನು ಮೀರಿ

ಬೆಳೆಯುವ ಪ್ರಯತ್ನದಲ್ಲಿ ವ್ಯವಸ್ಥೆ ತೊಡರಾಗುತ್ತದೆ ಎಂಬುದನ್ನು ತುಂಬಾಡಿಯವರು ತಮ್ಮ ಬಾಲ್ಯದ ಅನುಭವಗಳೊಂದಿಗೆ ಸೂಕ್ಷ್ಮವಾಗಿ ಬಿಡಿಸಿಟ್ಟಿರುವುದನ್ನು ಆತ್ಮಕಥೆಯುದ್ದಕ್ಕೂ ಕಾಣಬಹುದು.

ಈ ಹಿನ್ನಲೆಯಲ್ಲಿ ನಾವು ದೊಡ್ಡ ಸೂಕ್ಷ್ಮಗ್ರಹಿಗಳಾಗಿ ನೋಡುವುದಾದರೆ ನಾನು ಈ ಆತ್ಮಕಥೆಯ ಆರಂಭದ ಅಧ್ಯಾಯಗಳಲ್ಲಿ ಉಲ್ಲೇಖಿಸಿರುವಂತೆ ಈ ಸಮಾಜದ ಅಸಮಾನತೆಯನ್ನು, ಅಮಾನವೀಯ ಅಸ್ಪೃಶ್ಯತೆಯನ್ನು ಕಿತ್ತೊಗೆಯಲೂ ಹುಟ್ಟಿಕೊಂಡ ಹನ್ನೆರಡನೇ ಶತಮಾನದ 'ವಚನ ಚಳುವಳಿ' ಕಾಯಕ ಯೋಗಿಗಳಾದ ಬಸವಣ್ಣ ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಜೇಡರದಾಸಿಮಯ್ಯ, ಮಾದಾರ ಚೆನ್ನಯ್ಯ, ಇನ್ನೂ ಮುಂತಾದ ವಚನಕಾರರು ಈ ಸಮಾಜದ ಅಸಮಾನ, ಜಾತಿ, ಧರ್ಮಗಳೆಂಬ ಗೋಡೆಗಳನ್ನು ಕೆಡುವಿ ತಮ್ಮ ಬದುಕಿನ ಅನುಭವಸಾರಗಳನ್ನು ವಚನಗಳ ರೂಪದಲ್ಲಿ ಈ ಸಮಾಜಕ್ಕೆ ಉಣಬಡಿಸಿದರು. ಆ ಅನುಭವ ವಚನಗಳೆ ನಮಗೆ ಶೋಷಿತ ಸಮುದಾಯದ ಮೊದಲ ಆತ್ಮಕಥೆಗಳಾಗಿ ನಿಲ್ಲುತ್ತವೆ.

ಹೀಗೆ ಕಾಯಕಗಳ ಕೈಲಾಸಗಳಾಗಿ ಮನುಷ್ಯ ಧರ್ಮವನ್ನು ಸಾರಿದ 'ವಚನಸಾಹಿತ್ಯದ ಸುಳಿಯಲ್ಲಿಯೇ ತಮ್ಮ ಬಾಲ್ಯದ ವೃತ್ತಿ ಬದುಕನ್ನು ಮರೆಮಾಚದೆ ತೆರೆದಿರುವ ರಾಮಯ್ಯನವರು ತಮ್ಮ ಆತ್ಮಕಥೆಯ ಮೂಲಕ ವಚನಕಾರರ ಆಶಯವನ್ನು ಹೊರಹಾಕಲು ಪ್ರಯತ್ನಿಸಿರುವುದನ್ನು ತಿಳಿಯಬಹುದು.

ಇವೆಲ್ಲದರ ನಡುವೆಯು ತಮ್ಮ ಹಳ್ಳಿಯಲ್ಲಿ ದಲಿತ ದಲಿತರ ನಡುವೆಯೆ ಮನೆಮಾಡಿದ್ದ ಅಸ್ಪೃಶ್ಯತೆಯನ್ನು ಅವರ 'ಜಾತಿಯ ಕಟ್ಟುಗಳು' ಪ್ರಸಂಗದಲ್ಲಿ ಹೊರಹಾಕುತ್ತಾರೆ. ನಮ್ಮ ಹಳ್ಳಿಯಲ್ಲಿ ಮಣೆಗಾರರಿಗೆ ಒಂದು ಬಾವಿ, ಹೊಲೆಯರಿಗೆ ಒಂದು ಪ್ರತ್ಯೇಕ ಬಾವಿ ಇತ್ತು. ಅವರ ಬಾವಿಯಲ್ಲಿ ನಾವಾಗಲಿ ಅಥವಾ ನಮ್ಮ ಬಾವಿಯಲ್ಲಿ ಹೊಲೆಯರಾಗಲಿ ನೀರು ಸೇದುವಂತಿರಲಿಲ್ಲ. ಹೊಲೆಯರ ಹೆಂಗಸರು ನಮ್ಮ ಹಟ್ಟಿಗೆ ಕೂಲಿಯಾಳುಗಳನ್ನು ಕರೆಯಲು ಬಂದರೆ ಕೆಂಡದ ಮೇಲೆ ನಡೆದುಬರುವಂತೆ ಭಾವಿಸಿಕೊಳ್ಳುತ್ತಿದ್ದರು. ಈ ಮಾತುಗಳಲ್ಲಿ ಒಂದು ಕಡೆ ಮೇಲ್ವರ್ಗದ ಸಮುದಾಯ ಇಡೀ ದಲಿತರನ್ನು ಶೋಷಿಸುತ್ತಿರುವ ಪರಿ ಒಂದು ಕಡೆಯಾದರೆ ದಲಿತರ ದಲಿತರನ್ನು

ಮಡಿ-ಮೈಲಿಗೆಯ ಹೆಸರಿನಲ್ಲಿ ಶೋಷಿಸುತ್ತಿದ್ದ ಆ ಹಳ್ಳಿಯ ವ್ಯವಸ್ಥೆ ಬಾಲಕ ರಾಮಯ್ಯನವರನ್ನು ಭಯ, ಆತಂಕಗೊಳಿಸದೆ ಬಿಟ್ಟಿರಲಾರದು. ಇಂತಹ ಪ್ರಸಂಗಗಳು ಬಾಲ್ಯದ ದಿನಗಳಲ್ಲಿ ಲೇಖಕರನ್ನು ಯಥೇಚ್ಛವಾಗಿ ಕಾಡಿರುವ ವಿಪರ್ಯಾಸದ ಇಂತಹ ಕಟ್ಟು-ಪಾಡುಗಳು ದಲಿತರಲ್ಲಿಯೇ ಇದ್ದ ಸಾಮಾಜಿಕ ಅಸಮಾನತೆಯನ್ನು ಬಿಂಬಿಸುತ್ತವೆ.

ಇನ್ನೂ ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ದೃಷ್ಟಿ ಹರಿಸುವುದಾದರೆ ಮಣೆಗಾರರು ಆ ಹಳ್ಳಿಯ ಧಾರ್ಮಿಕ ಹಬ್ಬ, ಜಾತ್ರೆಗಳಲ್ಲಿ ಪ್ರಧಾನಪಾತ್ರವಹಿಸುತ್ತಿದ್ದರು. ಊರನ್ನು ಶೃಂಗರಿಸಲು, ತಮಟೆ ಬಡಿಯಲು, ಮೆರವಣಿಗೆಯಲ್ಲಿ ಕುಣಿಯಲು ಬಳಸಲ್ಪಡುತ್ತಿದ್ದರು. ಆದರೂ ಆ ಊರಿನ ಯಾವುದೇ ದೇವಸ್ಥಾನಗಳಿಗೆ ದಲಿತರ ಪ್ರವೇಶ ಮಾಡುವಂತಿರಲಿಲ್ಲ. ಇನ್ನೂ ಒಳಹೊಕ್ಕು ನೋಡುವುದಾದರೆ ಮಣೆಗಾರರ ಮನೆದೇವರಾಗಿದ್ದ ವೀರನಾಗಮ್ಮನ ದೇವಸ್ಥಾನಕ್ಕೆ ಮಣೆಗಾರ ಜನರು ಹೋಗುವ ಹಾಗಿರಲಿಲ್ಲ. ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ದಲಿತರು ಕಲಾವಂತಿಕೆಯ ಶ್ರಮಜೀವಿಗಳೆನಿಸಿಕೊಂಡರು. ಧಾರ್ಮಿಕ ಮೌಢ್ಯಗಳು ದಲಿತರನ್ನು ಪ್ರತ್ಯೇಕಿಸದೆ ಬಿಡುತ್ತಿರಲಿಲ್ಲ ಎಂಬುದನ್ನು ಈ ಪ್ರಸಂಗಗಳ ಮೂಲಕ ಊರಿನ ಧಾರ್ಮಿಕ ತಾರತಮ್ಯಗಳನ್ನು ಹುದುಗಿಟ್ಟ ನೋವಿನಿಂದಲೇ ತುಂಬಾಡಿ ರಾಮಯ್ಯನವರು ಉಣಬಡಿಸುತ್ತಾರೆ.

ಹಾಗೆಯೇ ತುಂಬಾಡಿ ಹಳ್ಳಿಯಲ್ಲಿ ನಡೆಯುತ್ತಿದ್ದ ಬಾಬಯ್ಯನ ಜಾತ್ರೆ, ಅಂಗದನಪಾತ್ರ ಪ್ರಸಂಗಗಳಲ್ಲಿ ಸಾಂಸ್ಕೃತಿಕವಾಗಿ ಎಷ್ಟೇ ಕಲಾವಂತಿಕೆಯನ್ನು ಮೆರೆದರು. ಈ ವ್ಯವಸ್ಥೆ ಒಂದಾಗಿಸದೆ ಸಂಸ್ಕೃತಿಯ ಹೆಸರಿನಲ್ಲಿ ದಲಿತರನ್ನು ಪ್ರತ್ಯೇಕಿಸಲು ನಡೆಸುತ್ತಿದ್ದ ಹುನ್ನಾರಗಳನ್ನು ರಾಮಯ್ಯನವರು ಸೂಕ್ಷ್ಮವಾಗಿ ಬಿಡಿಸುತ್ತಾ ಹೋಗುತ್ತಾರೆ.

ಸಾಮಾಜಿಕವಾಗಿ ಬಡತನ, ಅಸಮಾನತೆಯ ನಡುವೆಯು ಆ ಊರಿನಲ್ಲಿ ಸಾಮೂಹಿಕವಾಗಿ ನಡೆಯುತ್ತಿದ್ದ ಕಳ್ಳಭಟ್ಟಿದಂದೆಯನ್ನು, ಕಳ್ಳಭಟ್ಟಿ ಕುಡಿತದಿಂದ ಅಸುನೀಗುತ್ತಿದ್ದ ಜನರು, ಕಳ್ಳಭಟ್ಟಯಿಂದ ಬೀದಿ ಪಾಲಾಗುತ್ತಿದ್ದ ಕುಟುಂಬಗಳ ಧಾರುಣ ಸ್ಥಿತಿಗಳು ಲೇಖಕರ ಬಾಲ್ಯದ ದಿನಗಳಲ್ಲಿಯೇ ಹೆಚ್ಚು ಪರಿಣಾಮ ಬೀರಿರುವುದನ್ನು ಕಾಣಬಹುದು. ಇಂತಹ ಘಟನೆಗಳು ಲೇಖಕರುಸೇರಿದಂತೆ ಊರಿನಲ್ಲಿ

ಶಿಕ್ಷಣ ಕಲಿಯುತ್ತಿದ್ದ ಮಕ್ಕಳ ಭವಿಷ್ಯವನ್ನು ದಿಕ್ಕು ತಪ್ಪಿಸುವ ಕೆಲಸವನ್ನು ಮಾಡುತ್ತಿದ್ದು. ಇಂಥಹ ಅವ್ಯವಸ್ಥೆಯ ನಡುವೆ ಲೇಖಕರು ದನ ಮೇಯಿಸಲು ಕಾಡಿಗೆ ಹೋಗುವಾಗ ತಮಗರಿವಿಲ್ಲದೆ ಹಕ್ಕಿ ಹಾಗೂ ಅದರ ಮರಿಗಳನ್ನು ಬೆಂಕಿಯಿಂದ ದೂಡಲು ಯತ್ನಿಸಿದಾಗ ತಪ್ಪನ್ನು ತಿದ್ದಿ ವಿವೇಕ ಹೇಳಿದ ರಂಗ ರಾಮಣ್ಣನ ಮಾತುಗಳು ಲೇಖಕರ ಬದುಕಿನ ಏಳಿಗೆಗೆ ಕಾರಣವಾದವು ಎಂಬುದನ್ನು ಉಲ್ಲೇಖಿಸಲು ರಾಮಯ್ಯನವರು ಮರೆಯುವುದಿಲ್ಲ.

ಆತ್ಮಕಥೆಯೊಳಗಿನ ತುಂಬಾಡಿ ರಾಮಯ್ಯನವರ ಬಾಲ್ಯದ ದಿನಗಳನ್ನು ಅವಲೋಕಿಸಿದಾಗ ಅವರ ಬಾಲ್ಯದ ಅನೇಕ ಅನುಭವಗಳು ಅವರ ಮುಗ್ಧ ಮನಸ್ಸಿನ ಮೇಲೆ ಅಚ್ಚಳಿಯದೆ ಮುದ್ರೆಒತ್ತಿರುವುದು ಅವರ ಬರವಣಿಗೆಯಿಂದಲೇ ತಿಳಿಯುತ್ತದೆ. ಒಂದು ಕಡೆ ಮನುಷ್ಯತ್ವದ ಮೇಲೆ ದಬ್ಬಾಳಿಕೆಯಾಗಿರುವುದನ್ನು ಕಂಡರೆ ಅದೇ ಮನುಷ್ಯತ್ವಗಳು ಲೇಖಕರನ್ನು ಬೆಳೆಯಿಸಲು ಪ್ರೋತ್ಸಾಹಿಸಿವೆ. ಇವೆಲ್ಲಾ ತಲ್ಲಣಗಳ ನಡುವೆಯು ಕಾಯಕಯೋಗಿಯಂತೆ ಬಾಲ್ಯದಲ್ಲಿಯೇ ಚಪ್ಪಲಿಹೊಲೆದು, ತಮಟೆ ಬಡಿದು, ದನಗಳನ್ನುಮೇಯಿಸಿ, ಹೆಮ್ಮರವಾಗಿ ಬೆಳೆದ ತುಂಬಾಡಿ ರಾಮಯ್ಯನವರ ತುಂಬು ಬದುಕನ್ನು ಅಭಿವ್ಯಕ್ತಿಸುತ್ತದೆ.

ಇಡಿಯಾಗಿ ತುಂಬಾಡಿ ರಾಮಯ್ಯನವರ ಆತ್ಮಕಥೆಯೊಳಗಿನ ಆಳದ ಹರವನ್ನು ವಿವೇಚಿಸಿದಾಗ ಮುಖ್ಯವಾಗಿ ಬಡತನ, ಹಸಿವು, ಅಸ್ಪೃಶ್ಯತೆಗಳನ್ನು ಅನುಭವಿಸುತ್ತಲೆ ಅನುಭವದ ಕರಿಯೊಡಲಲ್ಲೆ ಶಿಕ್ಷಣದ ಕಸಿ ಪಡೆದು ಮೊಳಕೆಯೊಡೆಯುತ್ತ ಬಾಲ್ಯದ ವ್ಯವಸ್ಥೆಯನ್ನು ಮೀರಿ ಬದುಕಿನ ಹೊಸ ಆಶಯದೊಂದಿಗೆ ಹೋರಾಟ ಚಳುವಳಿಗಳೊಟ್ಟಿಗೆ ಸೃಜನಶೀಲವಾಗಿ ಬೆಳೆದಿರುವುದನ್ನು ಕಾಣಬಹುದು.

ಒಟ್ಟಾರೆ ಈ ಮೂರೂ ಆತ್ಮಕಥೆಗಳನ್ನು ಅವಲೋಕಿಸಿದಾಗ ಈ ಮೂರೂ ಆತ್ಮಕಥೆಗಳಲ್ಲಿ ಹರಿದಾಡಿರುವ ದಲಿತಸಮಾಜದಸಾಮ್ಯತೆಗಳನನ್ನು ಕಾಣಬಹುದು. ದಲಿತರ ಬದುಕಿನ ಶೋಷಣೆ, ಆರ್ಥಿಕವಾಗಿ ಸಾಮಾಜಿಕವಾಗಿ, ಧಾರ್ಮಿಕವಾಗಿ ಹಾಗೂ ಶೈಕ್ಷಣಿಕವಾಗಿ ಏಕರೀತಿಯಲ್ಲಿಯೇ ಮೈದಾಳಿಕೊಂಡಿವೆ. ಅದೇ ರೀತಿ ಈ ಮೂರೂ ಬಾಲ್ಯದ ಬದುಕುಗಳು ದಲಿತನೆಂಬ ಕಾರಣದ ಹಿನ್ನೆಲೆಯಲ್ಲಿ ಹಲವು ಅಪಮಾನ ನಿಂದನೆಗಳಿಗೆ ಗುರಿಯಾಗುತ್ತಲೇ ಗಟ್ಟಿತನದೊಂದಿಗೆ ವ್ಯವಸ್ಥೆಯನ್ನು ಮೀರಿ ಬೆಳೆದಿರುವುದು ಲೇಖಕರ ಹೋರಾಟದ ಬದುಕನ್ನು ಪುಷ್ಟಿಕರಿಸುತ್ತವೆ.

ಬಹಳ ಮುಖ್ಯವಾಗಿ ಈ ಮೂರೂ ಆತ್ಮಕಥೆಗಳಲ್ಲಿ ಅರವಿಂದ ಮಾಲಗತ್ತಿ, ಸಿದ್ಧಲಿಂಗಯ್ಯ, ತುಂಬಾಡಿ ರಾಮಯ್ಯನವರ ದಲಿತ ಬದುಕುಗಳಷ್ಟೇ ಪ್ರತಿನಿಧಿಸಿಲ್ಲ ಬದಲಾಗಿ ಇಡಿ ದಲಿತ ಕೇರಿಗಳಿವೆ. ದಲಿತರ ಬರ್ಬರ ಬದುಕುಗಳಿವೆ. ಹಸಿವಿನ ನರಳಾಟಗಳಿವೆ. ಸುಂದರ ಕನಸುಗಳಿವೆ. ಭಾವನೆಗಳಹೂವುಗಳಿವೆ. ಇವುಗಳೆಲ್ಲಾ ಹಸನಾಗಲೂ ಶಿಕ್ಷಣದ ಅವಶ್ಯಕತೆಯಿದೆ. ಭರವಸೆಯ ಬದುಕುಬೇಕಿದೆ. ಇಂತಹ ಹೊಸ ಬದುಕಿನ ಆಶಯವೆ ಈ ಸಮಾಜವನ್ನು ಬದಲಾವಣೆಯ ಪಥದತ್ತ ಮುನ್ನೆಡೆಸುತ್ತದೆ ಎಂಬುದು ನನ್ನ ಆಶಯ

<u>ಅಡಿಟಿಪ್ಪಣಿ</u>


೧. ದಲಿತಮಾರ್ಗ, ಸಂ. ಡಾ. ಅರವಿಂದ ಮಾಲಗತ್ತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

೨. ಕನ್ನಡ ದಲಿತಸಾಹಿತ್ಯ, ಸಂ.ಡಾ. ಅರ್ಜುನಗೊಳಸಂಗಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩. ಗೌರ್ಮೆಂಟ್ ಬ್ರಾಹ್ಮಣ, ಡಾ. ಅರವಿಂದ ಮಾಲಗತ್ತಿ

೪. ಊರು-ಕೇರಿ, ಡಾ. ಸಿದ್ಧಲಿಂಗಯ್ಯ

೫. ಅನುಸಂಧಾನ, (ಆಧುನಿಕ ಮರಾಠಿ ಸಾಹಿತ್ಯಾವಲೋಕನ), ಚಂದ್ರಕಾಂತ ಪೋಕಳೆ

೬. ಸುವರ್ಣವಿಚಾರ ಸಾಹಿತ್ಯ, ಸಂ. ಡಾ.ಬಸವರಾಜ ಕಲ್ಗುಡಿ

೮. ಸುಗ್ಗನಹಳ್ಳಿ ಗ್ರಾಮ ಸಾಂಸ್ಕೃತಿಕ ಅಧ್ಯಯನ, ಡಾ.ಕೆ.ವಿ. ಚಂದ್ರಣ್ಣೇಗೌಡ

# ಅಧ್ಯಾಯ - ೫

## ಸಮಾರೋಪ

ಕುತೂಹಲದಿಂದಲೇ ಆರಂಭಿಸಿದ ನನ್ನ ಸಂಶೋಧನಾ ಪ್ರಬಂಧ 'ಕನ್ನಡ ದಲಿತ ಆತ್ಮಕಥೆಗಳಲ್ಲಿ ಬಾಲ್ಯ' ಪ್ರಬಂಧಕ್ಕೆ ಅಂತಿಮ ಹಂತಕ್ಕೆ ಬಂದಿದ್ದೇನೆ. ಅಂದರೆ ಇಡೀ ಪ್ರಬಂಧವನ್ನು ಸಿಂಹಾವಲೋಕನ ಕ್ರಮದಲ್ಲಿ ನೋಡುವ 'ಸಾರರೂಪ'ದ ಈ ಅಧ್ಯಾಯದ ಬರವಣಿಗೆಗೆ ತೊಡಗಲು ಉತ್ಸುಕನಾದಷ್ಟು ಜೊತೆಯಲ್ಲೇ ಆತಂಕವೂ ಹಿಂಬಾಲಿಸುತ್ತಿದೆ. ಯಾಕೆಂದರೆ ನಾನು ನಿರ್ದಿಷ್ಟಪಡಿಸಿಕೊಂಡ ಅಧ್ಯಾಯಗಳಲ್ಲಿ ಹೇಳಬೇಕಾದ ವಿಷಯಸಾರವನ್ನು ಸ್ಪಷ್ಟವಾಗಿ, ನಿರಾತಂಕವಾಗಿ ಹೇಳಿದ್ದರು. ನನ್ನ ಗಮನಕ್ಕೆ ಬಾರದ ಸಣ್ಣ ಪುಟ್ಟ ತಪ್ಪುಗಳು ಮರುಕಳಿಸಿರಬಹುದಾದ ಸಾಧ್ಯತೆಯೂ ಇರಬಹುದಾದರೂ ಆ ಸಾಧ್ಯತೆಗಳಿಗೆ ನನ್ನ ಪ್ರಬಂಧದಲ್ಲಿ ಹೆಚ್ಚು ಅವಕಾಶ ನೀಡದೆ ಎಚ್ಚರಿಕೆಯಿಂದಲೇ ಪ್ರಬಂಧದ ಪರಿಪೂರ್ಣತೆಗೆ ಆದಷ್ಟು ಪ್ರಾಮಾಣಿಕವಾಗಿಯೇ ಶ್ರಮವಹಿಸಿ ಕೆಲಸ ನಿರ್ವಹಿಸಿದ್ದೇನೆ. ಅದರ ನಡುವೆಯು ನನ್ನ ಅಧ್ಯಯನದ ಮಿತಿಯೊಳಗೆ ತಪ್ಪು ಮಾಹಿತಿಗಳು ಉಲ್ಲೇಖಗೊಂಡಿದ್ದರೆ ಅದಕ್ಕೆ ಕ್ಷಮೆಯಾಚಿಸುತ್ತೇನೆ.

ನನ್ನ ದಲಿತ ಆತ್ಮಕಥೆಗಳಲ್ಲಿ ಬಾಲ್ಯ' ಎಂಬ ಪ್ರಬಂಧದ ವ್ಯಾಪ್ತಿಯು ಮಿತಿಯಲ್ಲಿಯು ವಿಸ್ತಾರವಾಗಿಯೇ ಬೆಳೆಸಲು ಪ್ರಯತ್ನಿಸಿದ್ದೇನೆ. ಅಂತೆಯೇ ನನ್ನ ಅಧ್ಯಯನದ ಪರಿಧಿಯೊಳಗೆ ಐದು ಅಧ್ಯಾಯಗಳಿದ್ದು ಮೊದಲನೇ ಅಧ್ಯಾಯದಲ್ಲಿ 'ಪ್ರಕಾರ ಸಾಹಿತ್ಯವಾಗಿ ಆತ್ಮಕಥೆಗಳು ಬೆಳೆದು ಬಂದ ಬಗೆಯನ್ನು ಅವಲೋಕಿಸಲಾಗಿದೆ. ಭಾರತೀಯ ಸಾಹಿತ್ಯದಲ್ಲಿ ಅದರಲ್ಲೂ ಕನ್ನಡ ಸಾಹಿತ್ಯದ ಒಡಲಿನಲ್ಲಿ ಮೈದುಂಬಿರುವ ಕಾವ್ಯ, ಕಥೆ, ನಾಟಕ, ಕಾದಂಬರಿಗಳಿಗಿಂತ ತಾತ್ವಿಕವಾಗಿ ಮೌಲ್ಯೀಕರಣಕ್ಕೆ ಸಿಗುವ ಆತ್ಮಕಥೆಗಳು ಭಿನ್ನವಾಗಿಯೂ, ವಿಶಿಷ್ಟವಾಗಿಯೂ ತೋರುವುದು ಸಹಜವಾಗಿದೆ.

ಯಾವುದೇ ವ್ಯಕ್ತಿ ತನ್ನಬ ದುಕನ್ನು ತಾನೇ ಸಮೀಕ್ಷೆ ನಡೆಸಿ ಮುಕ್ತಿಚೇತನ ಮನಸ್ಸಿನಿಂದ ತನ್ನಬದುಕಿನ ಪುಟಗಳನ್ನು ಬರೆದುಕೊಳ್ಳುವುದು 'ಆತ್ಮಕಥೆ' ಎನಿಸಿಕೊಳ್ಳುತ್ತದೆ. ಇಂಥ ಆತ್ಮಕಥೆಗಳಿಗೆ ಒಂದು ಕಾದಂಬರಿಯ ಸುವರ್ಣ ಚೌಕಟ್ಟನ್ನು

ಹಾಕಿ ನೋಡಬಹುದು. ಆದರೆ ಕಾದಂಬರಿಯಾಗಿ ನೋಡುವ ಸಾಧ್ಯತೆಯನ್ನು ಆತ್ಮಕಥೆ ಪಡೆಯಲಾರದು. ಯಾಕೆಂದರೆ ನೈಜ ಬದುಕಿನ ವಾಸ್ತವ ಸಂಗತಿಗಳ ನೆನಪಿನ ಗಣಿಯಾಗಿರುವುದರಿಂದ ಆತ್ಮಕಥೆಗಳಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ ಎಂಬುದನ್ನು ಮರೆಯಲಾಗದು.

ಹಾಗೆಯೇ ಆತ್ಮಕಥೆಗಳ ಉದ್ದೇಶ ಯಾವುದೇ ವ್ಯಕ್ತಿಯ ಕೀರ್ತಿ ಪ್ರತಿಷ್ಠೆಗಳ ವೈಭವೀಕರಣವಲ್ಲಾ. ಬದಲಾಗಿ ವ್ಯಕ್ತಿಯೊಬ್ಬ ತಾನು ಬದುಕಿದ ರೀತಿ ರಿವಾಜುಗಳನ್ನು, ತಾನು ಬದುಕಿನಲ್ಲಿ ಅನುಭವಿಸಿದ, ಕಂಡೂಂಡ ಅಂತರಂಗ ಮತ್ತೆ ಬಹಿರಂಗದಗ ಜಂಗಮ ಸ್ಥಿತಿಯ ನಿರ್ವಾಣ ದಾಖಲೆಯೂ ಆಗಿ ಪರಿಣಮಿಸಿರುತ್ತದೆ ಎಂಬುದನ್ನು ಮರೆಯುವಂತಿಲ್ಲ.

ಮುಖ್ಯವಾಗಿ ಒಬ್ಬ ವ್ಯಕ್ತಿ ಬದುಕಿನುದ್ದಕ್ಕೂ ಅನುಸರಿಸಿದ ಜೀವನ ಪದ್ಧತಿ, ಆಚರಣೆಗೆ ತಂದ ತತ್ವಸಿದ್ಧಾಂತ, ಕಂಡೊಂಡ ಅನುಭವಗಳಂತಹ ವಾಸ್ತವ ಸಂಗತಿಗಳ ಕಲಾತ್ಮಕ ಸಾಹಿತ್ಯವಾಗಿ ಆತ್ಮಕಥೆಗಳು ಬದುಕಿನ ಅರ್ಥಪೂರ್ಣತೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆಂಬುದನ್ನು ಇಲ್ಲಿ ನೆನಪು ಮಾಡಿಕೊಳ್ಳಲಾಗಿದೆ. ಅಲ್ಲದೆ ಆತ್ಮಕಥೆಗಳು ಇತರರಿಗೂ ಮಾರ್ಗದರ್ಶಿತವಾಗಿ ನಿಲ್ಲುವುದನ್ನು ಗುರುತಿಸುತ್ತಾ ಅವು ಬೆಳೆದು ಬಂದ ಬಗೆಯ ಸಾರರೂಪವನ್ನು ದಾಖಲಿಸಿ ಬರೆಯಲಾಗಿದೆ.

ಪ್ರಬಂದಧ ಎರಡನೇ ಅಧ್ಯಾಯಗಳಲ್ಲಿ 'ಕನ್ನಡ ಸಾಹಿತ್ಯದಲ್ಲಿನ ಒಟ್ಟು ಆತ್ಮಕಥೆಗಳ ವಿಸ್ತಾರ ಸಮೀಕ್ಷೆಯನ್ನು ಸಂಕ್ಷಿಪ್ತ ರೂಪದಲ್ಲಿ ಹೇಳಲಾಗಿದೆ. ಇದುವರೆಗೂ ಕನ್ನಡದಲ್ಲಿ ದಾಖಲಾಗಿರುವ ಕವಿಗಳ, ಕಾದಂಬರಿಕಾರರ, ನಾಟಕಕಾರ, ಕಲಾವಿದರ, ಧಾರ್ಮಿಕ ವ್ಯಕ್ತಿಗಳ, ಸಮಾಜಸೇವಕರ...... ಆತ್ಮಕಥೆಗಳನ್ನು ಸಮೀಕ್ಷೆಯ ರೂಪದಲ್ಲಿ ಅಧ್ಯಯನ ನಡೆಸಿ ಅವುಗಳ ಸಮೀಕ್ಷಾ ಪಟ್ಟಿಯನ್ನು ವರ್ಷಾನುಕ್ರಮವಾಗಿ ಉಲ್ಲೇಖಿಸಲಾಗಿದೆ.

ಈ ಅಧ್ಯಾಯವು ಈ ಪ್ರಬಂಧದ ಮುಖ್ಯ ಅಂಗವಾಗಿ ಕಂಡಿದ್ದರಿಂದ ಸಾಕಷ್ಟು ಶೋಧಿಸಿ ಆತ್ಮಕಥೆಗಳ ಮುಖ್ಯ ಒಳನೋಟಗಳನ್ನು ಅವಲೋಕಿಸಲಾಗಿದೆ. ಮುಖ್ಯವಾಗಿ ಶಿವರಾಮಕಾರಂತರ 'ಹುಚ್ಚುಮನಸ್ಸಿನ ಹತ್ತು ಮುಖಗಳು' ಕುವೆಂಪು ರವರ 'ನೆನಪಿನ ದೋಣಿಯಲ್ಲಿ, ಆಲೂರು ವೆಂಕಟರಾಯರ 'ನನ್ನ ಜೀವನ ಸ್ಮ ತಿಗಳು, ಗುಬ್ಬಿ ವೀರಣ್ಣರವರ 'ಕಲೆಯೇ ಕಾಯಕ' ರಂ. ಶ್ರೀ.ಮುಗಳಿಯವರ 'ಜೀವನ ರಸಿಕ'

ಬೀಚಿಯವರ 'ನನ್ನ ಭಯಾಗ್ರಫಿ' ಎ.ಎನ್. ಮೂರ್ತಿರಾಯರ ಸಂಜೆಗಣ್ಣಿನ ಹಿನ್ನೋಟ, ದೇ. ಜವರೇಗೌಡರ ಹೋರಾಟದ ಬದುಕು.... ಹೀಗೆ ಕನ್ನಡದ ಪ್ರಮುಖ ಆತ್ಮಕಥೆಗಳತ್ತ ಹೆಚ್ಚು ಕೇಂದ್ರೀಕರಿಸಿ ಅವುಗಳನ್ನು ಕಲೆಹಾಕುವ ಜೊತೆಗೆ ಅವುಗಳ ಅಂತರಾಳದ ಕನ್ನಡಿಯನ್ನು ಪರಿಚಯದ ಗೋಡೆಗೆ ತೂಗು ಹಾಕುವ ಕೆಲಸವನ್ನು ನಿರ್ವಹಿಸಿದ್ದೇನೆ.

ಪ್ರಬಂಧದ ಮೂರನೇ ಅಧ್ಯಾಯದಲ್ಲಿ ಕನ್ನಡ ದಲಿತ ಸಾಹಿತ್ಯದ ಪ್ರಮುಖ ಆತ್ಮಕಥೆಗಳಾಗಿ ಗೌರ್ಮೆಂಟ್ ಬ್ರಾಹ್ಮಣ, ಊರುಕೇರಿ, ಮಣೆಗಾರ, ಕೃತಿಗಳ ಸತ್ವಾರೂಪವನ್ನು ವಿವೇಚಿಸಲಾಗಿದೆ. ಮರಾಠಿ ದಲಿತ ಸಾಹಿತ್ಯದ ಪ್ರಭಾವದಿಂದ ಕನ್ನಡ ದಲಿತ ಸಾಹಿತ್ಯದಲ್ಲಿ ಮೈದಳೆದ ಆತ್ಮಕಥೆಗಳು ಬೆರಳೆಣಿಕೆಯಷ್ಟಾದರೂ ಅವುಮೂಡಿಸಿರುವ ಛಾಪು ವಿಶಿಷ್ಟವಾದದ್ದು. ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯು ಕನ್ನಡದಮೊದಲ ದಲಿತ ಆತ್ಮಕಥೆಯಾಗಿದ್ದು ಅದು ದಾಖಲಿಸಿರುವ ದಲಿತಾತ್ಮಕ ಅಂಶಗಳು ನಾಗರೀಕ ಜಗತ್ತನ್ನು ಕೆಣಕುವಂಥದ್ದು. ನಾಗರೀಕರೆನಿಸಿಕೊಂಡ ಜನರು ಶೂದ್ರ-ದಲಿತರ ಮೇಲೆ ನಡೆಸಿರುವ ಶೋಷಣೆಗಳು ಮತ್ತು ಮುಗ್ಧ ಮನಸ್ಸುಗಳೆಂಬ ಹಸಿ ಗೋಡೆಯ ಮೇಲೆ ಅವು ಅಚ್ಚಾಗಿ ನಿಂತಿರುವ ಗುರುತನ್ನು ಈ ಕೃತಿಯಲ್ಲಿ ಕಾಣಬಹುದು.

ಅದೇ ನೆಲೆಯಲ್ಲಿ ಸಾಗುವ ಸಿದ್ದಲಿಂಗಯ್ಯನವರ 'ಊರು-ಕೇರಿ' ಆತ್ಮಕಥೆ ಮಾನವೀಯ ನೆಲೆಯಲ್ಲಿಶೋಷಣೆಯ ಮತ್ತು ಹೋರಾಟದ ಬದುಕನ್ನು ಸಂಕ್ಷೇಪಿಸಿ ವಿಶ್ಲೇಷಿಸುತ್ತದೆ. ದಲಿತರು ಬದುಕುತ್ತಿರುವ ನೆಲವೀಡುಗಳ ಮೇಲೆ ಮಾನಸಿಕವಾಗಿ ಕೃತ್ಯಗಳನ್ನೆಸಗುವ ಮೇಲ್ಪಂಕ್ತಿಯ ಜನರು ಶೂದ್ರ-ದಲಿತರನ್ನುದೈಹಿಕವಾಗಿ, ಮಾನಸಿಕವಾಗಿ ಗಾಯಗೊಳಿಸಿ ತಮಾಷೆ ನೋಡುತ್ತಾರೆ.ಇಂಥ ಸಂದರ್ಭದಲ್ಲಿ ಮುಗ್ಧಬಾಲ್ಯದ ಮೇಲೆ ಬೀಳುವ ಪೆಟ್ಟು ಈ ಆತ್ಮಕಥೆಯಲ್ಲಿ ಬಿತ್ತರಗೊಂಡಿದೆ.

ಈ ನಿಟ್ಟಿನಲ್ಲಿಯೇ ತೆರೆದುಕೊಳ್ಳುವ ತುಂಬಾಡಿ ರಾಮಯ್ಯನವರ 'ಮಣೆಗಾರ' ಹೆಸರಿನ ಆತ್ಮಕಥೆಯು ವಿಶಿಷ್ಟ ನೆಲೆಯಲ್ಲಿ ನಿಲ್ಲುತ್ತದೆ. ಯಾಕೆಂದರೆ ಮೇಲಿನ ಎರಡು ಆತ್ಮಕಥೆಗಳಿಗಿಂತ ಇದು ದಾಖಲಿಸುವ ಸಂಗತಿ ಸಂಕ್ಷಿಪ್ತವಾದರೂ ಪರಿಣಾಮಕಾರಿಯಾದ ಆತ್ಮವನ್ನು ಪಡೆದುಕೊಳ್ಳುತ್ತದೆ. ಶೈಕ್ಷಣಿಕವಾಗಿ, ಧಾರ್ಮಿಕವಾಗಿ, ಸಾಮಾಜಿಕವಾಗಿ ದಲಿತರು

ಅನುಭವಿಸುವ ಹಿಂಸೆ, ಅವಮಾನ, ದೌರ್ಜನ್ಯ, ಶೋಷಣೆ ಮುಂತಾದ ಕೃತ್ಯಗಳ ಕಿರಾಕತನ ಇವೆಲ್ಲವೂ ಒಂದು ನೆಲೆಯಲ್ಲಿ ಮುಖಪಡೆಯುತ್ತವೆ. ಈ ಮುಖಗಳು ಸಮಾಜಕ್ಕೆ ಚಾಟಿಪೆಟ್ಟನ್ನಿಡುವಷ್ಟು ಗಟ್ಟಿಯಾಗಿ ನಿಲ್ಲುತ್ತವೆ. ಈ ಗಟ್ಟಿ ನಿಲ್ಲುವಿಕೆಯಲ್ಲೆ ಶೋಷಿತ ಜನಾಂಗದ ಬದುಕಿನ ಅನಾವರಣವಿದೆ.

ಈ ಪ್ರಬಂಧದಲ್ಲಿ ಮುಖ್ಯವಾಗಿ ದಲಿತ ಆತ್ಮಕತೆಗಳ ವಸ್ತು, ಭಾಷೆ, ನಿರೂಪಣೆ, ತಂತ್ರ, ಇವುಗಳ ಮಹತ್ವದ ವಿಚಾರಗಳನ್ನು ಚರ್ಚೆಮಾಡಲಾಗಿದೆ. ವಸ್ತುವಿನ ವಿಚಾರದಲ್ಲಿ ದಲಿತ ಆತ್ಮಕಥೆಗಳಿಗೆ ರಾಜಿಯಾಗುವ ಗುಣವಿಲ್ಲ. ದಲಿತರ ಬದುಕಿನ ಅಥವಾ ಅವರ ಕೇರಿಯ ಸುತ್ತಾ, ಮನಸ್ಸಿನ ಅಂಗಣದಲ್ಲಿ ರಿಂಗಾಣಿಸುವ ಮೂಕಧ್ವನಿ, ಒಳಗೊಳಗೆ ಮಡುಗಟ್ಟಿದ ಸಿಟ್ಟು ಇದು ಶಾಂತ ಸಮುದ್ರ ಹಾಗೆ ಒಮ್ಮೆ ಸುನಾಮಿಯಾಗಿ ಉಕ್ಕುವ ಧ್ವನ್ಯಾತ್ಮಕ, ವಾಚ್ಯಾಭಿವ್ಯಕ್ತಿಯ ವಸ್ತುಗಳನ್ನು ಶಿಲ್ಪವಾಗಿಸುತ್ತಾ ಬೆಳೆಯುತ್ತವೆ. ಈ ಮೂರು ಆತ್ಮಕಥೆಗಳು ದಲಿತಲೇಖಕರವು ಈ ದೃಷ್ಟಿ ಕೋನದಿಂದ ಪರ್ಯಾಲೋಚಿಸಿದಾಗ ನೆನಪಿನ ಬುತ್ತಿಯಿಂದ ಅಭಿವ್ಯಕ್ತಿಗೊಂಡ ವಸ್ತುವಿದೆ ದಲಿತರ ಗಾಢಮೌನದೊಳಗೆ ಉಳಿದಿದ್ದ ಉಳ್ಳವರ ಕ್ರೌರ್ಯದ ಮುಖವಾಣಿಗಳನ್ನೇ ವಸ್ತುವಾಗಿ ಪಡೆದುಕೊಳ್ಳಲಾಗಿದೆ.

ಭಾಷೆಯ ದೃಷ್ಟಿಯಲ್ಲಿ ಅರವಿಂದ ಮಾಲಗತ್ತಿಯವರ ಭಾಷೆಗೂ ತುಂಬಾಡಿ ರಾಮಯ್ಯನವರ 'ಮಣೆಗಾರ' ಆತ್ಮಕಥೆಯೊಳಗಿನ ಭಾಷೆಗೂ ಸಂಪೂರ್ಣ ಭಿನ್ನತೆ ಇದೆ. ಹಾಗೆಯೇ ಸಿದ್ಧಲಿಂಗಯ್ಯ ನವರ ಊರುಕೇರಿ ಆತ್ಮಕಥೆಯೊಳಗೆ ಹರಿದಾಡಿರುವ ಭಾಷೆ ಇವೆರಡು ಕೃತಿಗಳ ಭಾಷೆಗಿಂತ ವಿಭಿನ್ನವಾಗಿ ಕಾಣುತ್ತದೆ. ಅಂದರೆ ಈ ಮೂರು ಕೃತಿಗಳಲ್ಲಿಯು ಲೇಖಕರು ಹುಟ್ಟಿಬೆಳೆದ ನೆಲಸಮುದಾಯದ ಪ್ರಾದೇಶಿಕ ಭಾಷೆಯನ್ನು ಯಥಾವತ್ತಾಗಿ ತಮ್ಮ ಆತ್ಮಕಥೆಗಳಲ್ಲಿ ಬಳಸಿಕೊಂಡಿರುವುದನ್ನು ಕಾಣಬಹುದು. ಹಾಗಾಗಿ ಆತ್ಮಕಥೆಗಳಲ್ಲಿನ ಪ್ರಾದೇಶಿಕ ಭಿನ್ನತೆಯನ್ನು ಗುರ್ತಿಸಬಹುದಾದರೂ ಮೂರು ಕೃತಿಗಳಲ್ಲೂ ಅಪ್ಪಟ ಗ್ರಾಮ್ಯ ಬದುಕಿನ ಅವ್ಯಾಕರಣ ಭಾಷೆ ಸಾಮ್ಯವೆಂಬಂತೆ ಕೃತಿಗಳಲ್ಲಿ ಮೈಚಾಚಿಕೊಂಡು ಹರಿದಾಡಿವೆ.

ಇನ್ನೂ ನಿರೂಪಣೆಯ ವಿಷಯಕ್ಕೆ ಬಂದರೆ ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಕೃತಿ ತುಂಬಾ ವಿಶಿಷ್ಟವೆನಿಸುತ್ತದೆ. ಮಾಲಗತ್ತಿಯವರು ನಿರೂಪಣೆಯನ್ನು ಹಸಿಯಾಗಿಯೇ ಬಿಚ್ಚಿಡಲೂ ಪ್ರಯತ್ನಿಸಿದ್ದರೂ ಆ ಹಸಿತನದಲ್ಲಿ

ಪ್ರಬುದ್ಧತೆಯನ್ನು ಕಾಣಿಸಿದ್ದಾರೆ. ಅದೇ ನೆಲೆಯಲ್ಲಿಯೇ ಸಾಗುವ ತುಂಬಾಡಿ ರಾಮಯ್ಯನವರ ಮಣೆಗಾರ'ದ ನಿರೂಪಣೆಯೂ ಸಂಕ್ಷಿಪ್ತವಾಗಿ ಸಾಗುತ್ತದೆಯಾದರೂ ಆ ನಿರೂಪಣೆಯ ಹೊಸತನ ಕೃತಿಯ ಒಳಸುಳಿವುಗಳನ್ನು ಬಿಚ್ಚಿಡಲು ಮುಂದಾದಂತಿದೆ.ಇದು ಆಡಂಬರದ ಹುಸಿ ನಿರೂಪಣೆಯಾಗಿರದೆ ತನ್ನ ವರ್ಜಿನಾಲಿಟಿಯನ್ನು ಕಾಪಾಡಿಕೊಳ್ಳಲು ಹವಣಿಸುತ್ತದೆ. ಆದರೆ ಸಿದ್ಧಲಿಂಗಯ್ಯನವರ ಊರು ಕೇರಿ ಆತ್ಮಕಥೆಯು ನಿರೂಪಣೆಯಲ್ಲಿ ಕೊಂಚ ತಡವರಿಸುವಂತೆ ಮಾಡುತ್ತದೆ. ಎಲ್ಲಿಂದ ಎಲ್ಲಿಗೂ ತಂದು ಒಮ್ಮೆಗೆ ಬೇರೊಂದು ಸಂಗತಿಯೊಳಗೆ ಮಿಳಿತಗೊಳ್ಳುತ್ತದೆ. ಆದರೆ ಹುಸಿತನದ ಶೈಲಿಯಲ್ಲಿ ಡಾಳತನ (ಹೊಳಪು) ಎದ್ದು ಕಾಣುತ್ತದೆ.

ಈ ಮೂರು ಆತ್ಮಕಥೆಗಳನ್ನು ತಂತ್ರದ ಹಿನ್ನೆಲೆಯಲ್ಲಿ ನೋಡಿದಾಗ ಪ್ರತಿಯೊಬ್ಬ ಆತ್ಮಕಥೆಗಾರನು ತಮ್ಮ ಆತ್ಮಕಥೆಗಳಲ್ಲಿ ತಂತ್ರರೂಪಿಸುವುದು ಮುಖ್ಯ ಅನಿಸುವುದಿಲ್ಲ ಬದಲಾಗಿ ಆ ಕೃತಿಯಲ್ಲಿ ಹಿಡಿದಿಟ್ಟಿರುವ ಬದುಕನ್ನು ಪ್ರತಿಮಾತ್ಮಕವಾಗಿ ಅಭಿವ್ಯಕ್ತಿಸುವ ತಂತ್ರಗಾರಿಕೆ ಕೃತಿಯಲ್ಲಿ ಮುಖ್ಯವೆಂದು ತೋರುತ್ತದೆ. ಜೊತೆಗೆ ಬಳಸುವ ಭಾಷೆಯಲ್ಲಿ ಸಮಾಜದ ಬದಲಾವಣೆ ಕಾಣುವ ಸ್ಥಿತಿಯನ್ನು ನಿರ್ಮಾಣಗೊಳಿಸುವುದು ಅವಶ್ಯಕವಾಗಿ ಕಂಡುಬರುತ್ತದೆ. ಒಟ್ಟಾರೆ ಈ ಮೂರು ಆತ್ಮಕಥೆಗಳಲ್ಲಿ ಪ್ರಮುಖವಾಗಿ ಮಾನವೀಯ ಸಂಬಂಧಗಳ ಶೋಧದ ಅಭಿವ್ಯಕ್ತತೆಯನ್ನು ಗುರ್ತಿಸಬಹುದು.

ಪ್ರಬಂಧದ ನಾಲ್ಕನೇ ಅಧ್ಯಾಯದಲ್ಲಿ 'ದಲಿತ ಆತ್ಮಕಥೆಗಳಲ್ಲಿ ಅಭಿವ್ಯಕ್ತಗೊಂಡಿರುವ ಬಾಲ್ಯದ ಚಿತ್ರಣಗಳನ್ನು ಮುಖ್ಯವಾಗಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ವಿಭಾಗಿಸಿ ನೋಡಲಾಗಿದೆ. ಇದರಲ್ಲಿ ದಲಿತ ಲೇಖಕರು ತಮ್ಮ ಆತ್ಮಕಥೆಗಳನ್ನು ಸಮಾಜಕ್ಕೆ ಉಣಬಡಿಸುವಾಗ ಹೆಚ್ಚಾಗಿ ತಮ್ಮ ಬಾಲ್ಯದ ಹಸಿ ನೆನಪುಗಳನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ.

ಗೌರ್ಮೆಂಟ್ ಬ್ರಾಹ್ಮಣದಲ್ಲಿ ಮಾಲಗತ್ತಿಯವರು ತಮ್ಮ ಬಾಲ್ಯದ ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಎದುರಿಸಿದ ಅದರಲ್ಲೂ ತಮ್ಮ ಹಿರಿಯರು ಅನುಭವಿಸಿದ ಘಟನೆಗಳ ಗಂಭೀರ ಚಿಂತನೆಗಳು ಕೃತಿಯಲ್ಲಿ ಮೈದಾಳುವ ಮಾಲಗತ್ತಿಯವರ ಅಜ್ಜಿ (ಆಯಿ) ಯ ಪಾತ್ರ ಮತ್ತು ಅವರ ತಂದೆತಾಯಿ ಸಾಮಾಜಿಕವಾಗಿ ಎದುರಿಸಿ ನಿಂತ ಬಡತನ, ಅವಮಾನ,

ಬದುಕು, ಪಟ್ಟ ಪರಿಪಾಟಲು , ಮಾನವೀಯ ಪ್ರತಿಮೆಗಳ ಮೇಲೆ ನಡೆದ ದಾಳಿ ಇವೆಲ್ಲವೂ ಕೃತಿಯಲ್ಲಿ ಮನೆ ಮಾಡಿದ್ದು ಈ ಪ್ರಬಂಧದಲ್ಲಿ ವಿಸ್ತರಿಸಿ ವಿವೇಚಿಸಲಾಗಿದೆ.

ಈ ನೆಲೆಯಲ್ಲಿಯೇ ಇಣುಕುವ ಸಿದ್ಧಲಿಂಗಯ್ಯನವರ ಬಾಲ್ಯದ ಬದುಕು ತನ್ನ ಕುಟುಂಬದ ಬಡತನ, ದಲಿತರ ಬದುಕಿನ ಮೇಲೆ ಮೇಲಿಂದ - ಮೇಲೆ ನಡೆಯುವ ದೌರ್ಜನ್ಯ, ಇವುಗಳ ಜೊತೆಯಲ್ಲಿಯೇ ಬಾಲ್ಯದ ಶಿಕ್ಷಣಕ್ಕೆ ಸಿಕ್ಕುಪ್ರೋತ್ಸಾಹ, ಹೋರಾಟದಬದುಕಿಗೆ ಚಳುವಳಿ ರೂಪದಲ್ಲಿ ಸಿಕ್ಕ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರೇರಣೆ ಇವೆಲ್ಲವೂ ಸಹ 'ಊರು-ಕೇರಿ'ಯಲ್ಲಿ ತೆರೆದುಕೊಂಡಿವೆ. ಆದರೆ ಬಾಲಕನಾಗಿದ್ದ ಸಿದ್ಧಲಿಂಗಯ್ಯನವರ ಕಣ್ಣಳತೆಗೆ ಸಿಕ್ಕಿರುವ ಈ ಘಟನೆಗಳು ಕೇವಲ ಸಿದ್ಧಲಿಂಗಯ್ಯನವರ ಬದುಕಿನ ಮೂಲವಾಗಿದೆ. ದಲಿತ ಬದುಕಿನ ಬೀಜರೂಪಿಯಾದ ಮೌನದ ಕೊಲೆಯಾಗಿದೆ. ಗಾಯವಿಲ್ಲದೆ ರಕ್ತವಿಲ್ಲದೆ ನೋವು ಅನುಭವಿಸುವ ವೇದನೆ ಊರುಕೇರಿಯಲ್ಲಿ ಕಂಡುಬರುತ್ತದೆ.

ತುಂಬಾಡಿ ರಾಮಯ್ಯನವರ 'ಮಣೆಗಾರ' ಆತ್ಮಕಥೆಯಲ್ಲಿ ಬಾಲ್ಯದ ಹಸಿ ಚಿತ್ರಣಗಳು ತುಂಬಾ ಗಂಭೀರವಾಗಿಯೇ ಹೆಣೆದುಕೊಂಡಿವೆ. ಈ ತನಕ ಕಾವ್ಯ ಕಥನಗಳ ಮೂಲಕ ಹೊರ ಹೊಮ್ಮಿ ವಿಸ್ಮಯ ಹುಟ್ಟಿಸುವ ದಲಿತಾನುಭವಗಳು ಅಲ್ಲಿನ ಆಚರಣೆ, ನಂಬಿಕೆ, ನುಡಿಗಟ್ಟುಗಳು, ಈ ಮಣೆಗಾರ ಆತ್ಮಕಥನದ ಮೂಲಕ ತನ್ನ ಅಗಾಧ ಲೋಕವನ್ನು ಸಾಹಿತ್ಯದಲ್ಲಿ ವಿಸ್ತರಿಸುತ್ತಿರುವುದು ಹೆಮ್ಮೆಯ ಸಂಗತಿಯಾಗಿ ತೋರುತ್ತದೆ. ಮಣೆಗಾರ ಆತ್ಮಕಥನ ಕೇವಲ ರಾಮಯ್ಯನವರ ಆತ್ಮಕಥನ ಮಾತ್ರ ಆಗಿರದೆ ಇದು ತನ್ನನ್ನು ಸೃಜನಶೀಲವಾಗಿ ವಿಸ್ತರಿಸಿಕೊಂಡು ಒಂದು ಜನಾಂಗದ ಮುಖ್ಯವಾಗಿ ಒಂದು ಸಮುದಾಯದ ಆತ್ಮಕಥನವಾಗಿ ರೂಪಾಂತರಗೊಂಡಿದೆ.

ನನ್ನ ಪ್ರಬಂಧದ ಕೊನೆಯ ಅಧ್ಯಾಯವನ್ನು ಸಾರಾರೂಪದಲ್ಲಿ ಹಿನ್ನೋಟವಾಗಿ ಹಿಡಿದಿಡಲು ಪ್ರಯತ್ನಿಸಿದ್ದೇನೆ. ಅಂದರೆ ಈ ಮೇಲಿನ ನಾಲ್ಕು ಅಧ್ಯಾಯಗಳ ವಿಶ್ಲೇಷಣೆ, ವಿಮರ್ಶೆಯಂತೆ ಪಕ್ವತೆ ಪಡೆಯುತ್ತಾಸಾಗುವ ಈ ಅಧ್ಯಾಯ ಒಟ್ಟು ನೋಟಕ್ಕೆ ತಳಹದಿಯಾಗಿ ಕಂಡರೂ ಒಟ್ಟು ಪ್ರಬಂಧವನ್ನು ಇಡಿಯಾಗಿ ನೋಡಲು ಪ್ರಯತ್ನಿಸಿ ಪ್ರಬಂಧದ ವಿಶಾಲತೆಯನ್ನು ಹೆಚ್ಚಿಸುವಲ್ಲಿ ಕೊಂಚ ಯಶಸ್ವಿಯಾಗಿದೆ.

ಇಷ್ಟು ಈ ಪ್ರಬಂಧದ ಒಟ್ಟು ಹೂರಣವಾಗಿದ್ದು ಈಹೂರಣದಲ್ಲಿಎರವಲು ವಿಚಾರಗಳ ಜೊತೆ ಜೊತೆಯಲ್ಲಿಯೇ ವೈಯಕ್ತಿಕ ವಿಚಾರಗಳ ಮಂಡನೆ ಖಂಡನೆಗಳಿವೆ. ಹಾಗೆಯೇ ನನ್ನಪ್ರಬಂಧವು ವಿಶ್ವವಿದ್ಯಾನಿಲಯದ ಹಾಗೂ ನನ್ನ ಮಾರ್ಗದರ್ಶಕರ ನಿಯಮ ಸೂಚನೆಗಳಿಗೆ ಬದ್ಧವಾಗಿಯೇ ನಡೆದಿದ್ದು ಕೆಲವು ಮಿತಿಗಳ ನಡುವೆಯು ಪ್ರಾಮಾಣಿಕವಾಗಿಯೇ ಪ್ರಬಂಧವನ್ನು ಮಂಡಿಸಲು ಪ್ರಯತ್ನಿಸಿ ಯಶಸ್ವಿಯಾಗಿದ್ದನೆ.

ಒಟ್ಟಾರೆ ದಲಿತ ಆತ್ಮಕಥೆಗಳು ದಲಿತ ಬದುಕಿನ ಹಸಿ ಅನುಭವಗಳನ್ನು ಮೈಹೊದ್ದು ಆತ್ಮಕಥನವಾಗಿ ಕವಲೊಡೆದು ಪ್ರಕಾರ ಸಾಹಿತ್ಯವಾಗಿ ರೂಪ ಪಡೆದಿದ್ದರೂ ಇವು ಕೇವಲ ಆತ್ಮಕಥೆಗಳಾಗಷ್ಟೇ ತೋರದೆ ಕಥೆ, ನಾಟಕ, ಕಾದಂಬರಿ, ಕಾವ್ಯಗಳ ಮೂರ್ತರೂಪವನ್ನು ಅರಗಿಸಿಕೊಂಡು ಬರೀ ಕಾಲ್ಪನಿಕತೆಗಳಾಗದೆ ವಾಸ್ತವ ಬದುಕಿನ ರಕ್ತ-ಮಾಂಸಗಳಾಗಿ ಮೈದಳೆದು ಈ ಸಮಾಜದ ಮಾನವೀಯ ಸಂಬಂಧಗಳ ಬೆಸುಗೆಗೆ ಅಂತಃಕರಣದ ಶಕ್ತಿಯಾಗಿ ಆತ್ಮಕಥೆಗಳು ಮಿಡಿದಿರುವುದನ್ನು ಮನಗಾಣಬಹುದು.

# ಕನ್ನಡ ಸಾಹಿತ್ಯದ ಆತ್ಮಕಥೆಗಳ ಸಮೀಕ್ಷಾ ಪಟ್ಟಿ

| | ಲೇಖಕರ ಹೆಸರು | ಆತ್ಮಕಥೆಗಳ ಹೆಸರು | ವರ್ಷ |
|---|---|---|---|
| ೧. | ಹರ್ಡೇಕರ ಮಂಜಪ್ಪ | ನನ್ನ ಕಳೆದ ಮೂವತ್ತು ವರುಷಗಳು | ೧೯೩೬ |
| ೨. | ಜಿ.ಪಿ. ರಾಜರತ್ನಂ | ಹತ್ತು ವರುಷ | ೧೯೩೯ |
| ೩. | ಕೆ. ಶಿವರಾಮ ಕಾರಂತ | ಹುಚ್ಚು ಮನಸ್ಸಿನ ಹತ್ತುಮುಖಗಳು | ೧೯೪೮ |
| ೪. | ರಾವ್‌ಬಹುದ್ದೂರ್ | ಮರೆಯದ ನೆನಪುಗಳು | ೧೯೫೯ |
| ೫. | ಶ್ರೀ ರಂಗರು | ನಾಟ್ಯ ನೆನಪುಗಳು | ೧೯೬೧ |
| ೬. | ಗುಬ್ಬಿ ವೀರಣ್ಣ | ಕಲೆಯೇ ಕಾಯಕ | ೧೯೬೭ |
| ೭. | ಮಾಸ್ತಿ | ಭಾವ | ೧೯೬೮ |
| ೮. | ದೇ. ಜವರೇಗೌಡ | ಹೋರಾಟದ ಬದುಕು | ೧೯೬೮ |
| ೯. | ಡಾ. ರಾಜ್‌ಕುಮಾರ್ | ನಟಸಾರ್ವಭೌಮ | ೧೯೭೦ |
| ೧೦. | ವಿ. ಸೀತಾರಾಮಯ್ಯ | ಕಾಲೇಜು ದಿನಗಳು ಮತ್ತು ಮುಂಬೈ | ೧೯೭೧ |
| ೧೧. | ಅ.ನ. ಕೃಷ್ಣರಾಯರು | ಬರಹಗಾರನ ಬದುಕು | ೧೯೭೨ |
| ೧೨. | ಆಲೂರು ವೆಂಕಟರಾಯ | ನನ್ನ ಜೀವನ ಸ್ಮೃತಿಗಳು | ೧೯೭೩ |
| ೧೩. | ಕೋ. ಚನ್ನಬಸಪ್ಪ | ನನ್ನ ಮನಸ್ಸು ನನ್ನ ನಂಬುಗೆ | ೧೯೭೩ |
| ೧೪. | ಡಿ.ವಿ. ಗುಂಡಪ್ಪ | ಜ್ಞಾಪಕ ಚಿತ್ರಶಾಲೆ | ೧೯೭೪ |
| ೧೫. | ಎಚ್.ಕೆ. ವೀರಣ್ಣಗೌಡ | ಬದುಕು-ಮೆಲಕು | ೧೯೭೪ |
| ೧೬. | ಆರ್. ನಾಗೇಂದ್ರರಾವ್ | ಇದು ನನ್ನ ಕಥೆ | ೧೯೭೪ |
| ೧೭. | ಬಸವರಾಜ ಕಟ್ಟೀಮನಿ | ಕುಂದರನಾಡಿನ ಕಂದ | ೧೯೭೬ |
| ೧೮. | ಬೀಚಿ | ನನ್ನ ಬಯೋಗ್ರಫಿ | ೧೯೭೬ |
| ೧೯. | ವಿ.ಕೃ. ಗೋಕಾಕ್ | ಒಲವೇ ನನ್ನ ಬದುಕು | ೧೯೭೭ |
| ೨೦. | ಶ್ರೀ ರಂಗರಾಜು | ನಾನು ತುಳಿದ ಹಾದಿ | ೧೯೭೮ |
| ೨೧. | ಇ.ಎ.ಎಸ್. ಪ್ರಸನ್ನ | ಪ್ರಸನ್ನ ಜೀವನ ಒಂದು ಆತ್ಮಕಥೆ | ೧೯೭೮ |
| ೨೨. | ಕದಂಬಾಡಿ ಜತ್ತಪ್ಪ ರೈ | ಬೇಟೆಯ ನೆನಪುಗಳು | ೧೯೭೯ |
| ೨೩. | ಬಿ.ಜಿ.ಎಲ್. ಸ್ವಾಮಿ | ಪ್ರಾಧ್ಯಾಪಕನ ಪೀಠ | ೧೯೭೯ |

| | | |
|---|---|---|
| ೨೪. ಬಿ. ಜಯಮ್ಮ | ಅಭಿನೇತ್ರಿ | ೧೯೭೯ |
| ೨೫. ಡಿ. ಕೆಂಪರಾಜ ಅರಸ್ | ಅರವತ್ತು ವರ್ಷಗಳು | ೧೯೮೦ |
| ೨೬. ಕೆ.ವಿ.ಪುಟ್ಟಪ್ಪ | ನೆನಪಿನ ದೋಣಿಯಲ್ಲಿ | ೧೯೮೦ |
| ೨೭ ಶೇ.ಗೋ.ಕುಲಕರ್ಣಿ | ನಾನು ಕಂಡ ಗೆಳೆಯರ ಗುಂಪು | ೧೯೮೦ |
| ೨೮. ರಂ.ಶ್ರೀ. ಮುಗಳಿ | ಜೀವನ ರಸಿಕ | ೧೯೮೨ |
| ೨೯. ಮಲ್ಲಿಕಾರ್ಜುನ ಮನ್ಸೂರ | ನನ್ನ ರಸಯಾತ್ರೆ | ೧೯೮೩ |
| ೩೦. ಎನ್ಕೆ. ಕುಲಕರ್ಣಿ | ನಾನು ಕಂಡ ಗೆಳೆಯರ ಗುಂಪು | ೧೯೮೦ |
| ೩೧. ಚಿ.ನ. ಮಂಗಳಾ | ಅಧ್ಯಾಪಕಿಯಾಗಿ ಇಪ್ಪತ್ತೈದು ವರ್ಷ ಮತ್ತು ಸ್ನೇಹ ಸಿಂಧು | ೧೯೮೫ |
| ೩೨. ಜಿ.ಎಸ್. ಶಿವರುದ್ರಪ್ಪ | ಚದುರಂಗ | ೧೯೮೬ |
| ೩೩. ತ.ಸು. ಶಾಮರಾಯ | ಮೂರು ತಲೆಮಾರು | ೧೯೮೭ |
| ೩೪. ಸ.ಸ. ಮಾಳವಾಡ | ದಾರಿ ಸಾಗಿದೆ | ೧೯೮೯ |
| ೩೫. ಅಂಬುಜಾತ.ರಾ.ಸು | ಹಿಂತಿರುಗಿ ನೋಡಿದಾಗ | ೧೯೯೦ |
| ೩೬. ಅನುಪಮಾ ನಿರಂಜನ | ನೆನಪು ಸಿಹಿ-ಕಹಿ ಬರಹಗಾರ್ತಿಯ ಬದುಕು | ೧೯೮೫-೯೦ |
| ೩೭. ಎ.ಎನ್. ಮೂರ್ತಿರಾವ್ | ಸಂಜೆಗಣ್ಣಿನ ಹಿನ್ನೋಟ | ೧೯೯೦ |
| ೩೮. ಬಿ.ಡಿ. ಜತ್ತಿ | ನನಗೆ ನಾನೇ ಮಾದರಿ | ೧೯೯೦ |
| ೩೯. ಸಮೇತಹಳ್ಳಿ ರಾಮರಾಯ | ಕೋಟು ಕೊಟ್ಟ ಮನೆ | ೧೯೯೦ |
| ೪೦. ಉತ್ತಂಗಿ ಚೆನ್ನಪ್ಪ | ಆತ್ಮಚರಿತ್ರೆ | ೧೯೯೧ |
| ೪೧ ಕು.ಶಿ. ಹರಿದಾಸಭಟ್ಟ | ನಿವೇದನೆ | ೧೯೯೨ |
| ೪೨. ಎಸ್.ಆರ್. ಗುಂಜಾಳ | ನಾನು | ೧೯೯೨ |
| ೪೩. ನಂಜುಂಡಸ್ವಾಮಿ | ಅಜ್ಞಾತ ಅಧ್ಯಾಪಕನ ಆತ್ಮಚರಿತ್ರೆ | ೧೯೯೪ |
| ೪೪. ಪೆರ್ಲ ಕೃಷ್ಣಭಟ್ಟ | ಬದುಕಿ ಫಲವೇನು | ೧೯೯೪ |
| ೪೫. ಅರವಿಂದ ಮಾಲಗತ್ತಿ | ಗೌರ್ಮೆಂಟ್ ಬ್ರಾಹ್ಮಣ | ೧೯೯೪ |
| ೪೬. ಆರ್.ಸಿ. ಹಿರೇಮಠ | ಉರಿಬರಲಿ ಸಿರಿಬರಲಿ | ೧೯೯೫ |
| ೪೭. ಎಚ್. ನರಸಿಂಹಯ್ಯ | ಹೋರಾಟದಹಾದಿ | ೧೯೨೫ |

| | | | |
|---|---|---|---|
| ೪೮. | ಜಿ.ಎಂ. ಪಾಟೀಲ | ನೆನಪಿನಂಗಳದಲ್ಲಿ | ೧೯೯೫ |
| ೪೯. | ಕೆರೆಮನೆ ಶಿವರಾಮ ಹೆಗಡೆ | ನೆನಪಿನ ರಂಗಸ್ಥಳ | ೧೯೯೬ |
| ೫೦. | ಕಯ್ಯಾರ ಕಿಞ್ಞಣ್ಣರೈ | ದುಡಿಮೆಯೇ ನನ್ನ ದೇವರು | ೧೯೯೬ |
| ೫೧. | ಸೇಡಿಯಾಪು ಕೃಷ್ಣಭಟ್ಟ | ಈಶ್ವರ ಸಂಕಲ್ಪ | ೧೯೯೬ |
| ೫೨. | ಡಾ. ಸಿದ್ಧಲಿಂಗಯ್ಯ | ಊರುಕೇರಿ | ೧೯೯೬ |
| ೫೩. | ಎಸ್.ಎಲ್. ಭೈರಪ್ಪ | ಭಿತ್ತಿ | ೧೯೯೬ |
| ೫೪. | ಎಚ್.ಎಲ್. ನಾಗೇಗೌಡ | ನಾಗಸಿರಿ | ೧೯೯೬ |
| ೫೫. | ಪಿ. ಲಂಕೇಶ್ | ಹುಳಿಮಾವಿನ ಮರ | ೧೯೯೭ |
| ೫೬. | ಕೆ. ಗೋವಿಂದರಾಜು | ಮನವಿಲ್ಲದವರ ಮಧ್ಯೆ | ೨೦೦೧ |
| ೫೭. | ಸಿ.ಜಿ. ಕೃಷ್ಣಸ್ವಾಮಿ | ಕತ್ತಲೆ ಬೆಳದಿಂಗಳೊಳಗೆ | ೨೦೦೨ |
| ೫೮. | ಬಿ.ವಿ. ಕಾರಂತ | ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ | ೨೦೦೩ |
| ೫೯. | ಎಚ್.ಎಸ್. ಶಿವಪ್ರಕಾಶ್ | ಬತ್ತೀಸರಾಗ | ೨೦೦೩ |
| ೬೦. | ಸ.ಜ. ನಾಗಲೋಟಿಮಠ | ಬಿಚ್ಚಿದ ಜೋಳಿಗೆ | ೨೦೦೩ |
| ೬೧. | ವಾಸಂತಿ ಪಡುಕೋಣೆ | ಜೀವನ ಹೋರಾ | |
| ೬೨. | ಪಾರ್ವತಮ್ಮ ಮಹಲಿಂಗಶೆಟ್ಟಿ | ಹೆಣ್ಣಿನ ದೃಷ್ಟಿಯಲ್ಲಿ ಈ ಶತಮಾನ | |
| ೬೩. | ದು. ಸರಸ್ವತಿ | ಈಗೇನ್ ಮಾಡೀರಿ ? | |
| ೬೪. | ಪರಮೇಶ್ವರಿ ಲೋಕೇಶ್ | ಬಹುದಾನ್ಯದಿಂದ ಬಹುದಾನ್ಯಕ್ಕೆ | |
| ೬೫. | ಜಾಜಿ ತಿಮ್ಮಯ್ಯ | ಹೆಜ್ಜೇನು | |
| ೬೫. | ಸಾರಾ ಅಬೂಬಕ್ಕರ್ | ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು | |
| ೬೭. | ಶಶಿಕಲಾ ವೀರಯ್ಯ ಸ್ವಾಮಿ | ಅಪ್ಪ ಮತ್ತು ಮಣ್ಣು | |
| ೬೮. | ಡಾ. ಸಂಧ್ಯಾರೆಡ್ಡಿ | ಎಪ್ಪತ್ತರ ವಯಸ್ಸು ಇಪ್ಪತ್ತರ ಮನಸ್ಸು | |
| ೬೯. | ಎಚ್. ನಾಗವೇಣಿ | ವಸುಂಧರೆಯ ಗ್ಯಾನ | |
| ೭೦. | ಶಾರದಾ ಹೆಮ್ಮಿಗೆ | ಬದುಕು ಕೊಟ್ಟಿದ್ದು ಕಲಿಸಿದ್ದು | |
| ೭೧. | ಕೆ. ನಾಗರತ್ನಮ್ಮ | ಮರಿಯಮ್ಮನ ಹಳ್ಳಿ ರಂಗಸಿರಿ | |
| ೭೨. | ಡಾ. ಗಂಗೂಬಾಯಿ ಹಾನಗಲ್ | ನನ್ನ ಬದುಕಿನ ಹಾಡು | |

## ಗ್ರಂಥಋಣ


೧. ಕನ್ನಡ ವಿಶ್ವಕೋಶ : ಮೈಸೂರು ವಿಶ್ವವಿದ್ಯಾಲಯ

೨. ಅನುಸಂಧಾನ : ಚಂದ್ರಕಾಂತ ಪೋಕಳೆ (ಆಧುನಿಕ ಮರಾಠಿ ಸಾಹಿತ್ಯಾವಲೋಕನ)

೩. ಅಧ್ಯಯನದ ವಿಧಿವಿಧಾನಗಳು : ಸಂ.ಡಾ.ಕೆ. ರವಿಂದ್ರನಾಥ, ೨೦೦೮.

೪. ಸುವರ್ಣ ವಿಚಾರ ಸಾಹಿತ್ಯ : ಸಂ. ಡಾ. ಬಸವರಾಜ ಕಲ್ಗುಡಿ, ೨೦೦೬

೫. ಕನ್ನಡ ದಲಿತ ಸಾಹಿತ್ಯ : ಸಂ. ಡಾ. ಅರ್ಜುನ ಗೊಳಸಂಗಿ

೬. ದಲಿತಮಾರ್ಗ : ಸಂ. ಡಾ. ಅರವಿಂದ ಮಾಲಗತ್ತಿ

೭. ಮಾರ್ಗಸಾಹಿತ್ಯ : ಡಾ. ಕೆ. ಕೇಶವಶರ್ಮಾ

೮. ಬಡವರ ನಗುವಿನ ಶಕ್ತಿ : ಸಂ. ಎಚ್.ದಂಡಪ್ಪ, ೨೦೦೧

೯. ದಶಕದ ಕನ್ನಡ ಸಾಹಿತ್ಯ : ಡಾ. ಹಳ್ಳಿಕೇರಿ

೧೦. ಮಹಿಳಾ ಆತ್ಮಕಥೆಗಳು : ಅನುಸಂಧಾನ : ಡಾ. ಸಬಿಹಾ ಭೂಮಿಗೌಡ

೧೧. ಕನ್ನಡಸಾಹಿತ್ಯ ಮತ್ತು ಜನಪರ ಚಳುವಳಿ : ಸಂ. ಡಾ. ರಂಗರಾಜ ವನದುರ್ಗ, ೨೦೦೬.

೧೨. ಗೌರ್ಮೆಂಟ್ ಬ್ರಾಹ್ಮಣ ; ಡಾ. ಅರವಿಂದ ಮಾಲಗತ್ತಿ

೧೩. ಊರು-ಕೇರಿ : ಡಾ. ಸಿದ್ಧಲಿಂಗಯ್ಯ

೧೪. ಮಣೆಗಾರ : ತುಂಬಾಡಿ ರಾಮಯ್ಯ

೧೫. ಸುಗ್ಗನಹಳ್ಳಿ ಗ್ರಾಮ ಸಾಂಸ್ಕೃತಿಕ ಅಧ್ಯಯನ : ಡಾ. ಕೆ.ವಿ.ಚಂದ್ರಣ್ಣೇಗೌಡ

